ವರ್ಗಣಿ ದರ
(ಅಂಚೆವೆಚ್ಚ ಸೇರಿ)
ವರ್ಷಕ್ಕೆ ರೂ. ೬-೪-೦
೬ ತಿಂಗಳಿಗೆ ,, ೩-೪-೦
೩ ತಿಂಗಳಿಗೆ ,, ೧-೧೨-೦
ವ್ಹಿ. ಪಿ. ಮೂಲಕ
ತರಿಸಿಕೊಂಡಲ್ಲಿ ೫ ಆಣೆ
ಹೆಚ್ಚಿಗೆ ಬೀಳುವದು.

# ಕರ್ಮವೀರ

KARMAVEER
WEEKLY
HUBLI
NOV. 25
1946

ಸಂಪಾದಕರು: ಹ. ರಾ. ಪುರೋಹಿತ, ಎಂ. ಎ.

ಅಖಿಲ ಕರ್ನಾಟಕದಲ್ಲಿ ಅತ್ಯಂತ ಜನಪ್ರಿಯ ವಾರಪತ್ರಿಕೆ

Editor : H. R. Purohit, M. A.

ಸಂಪುಟ ೧೮ ] ಹುಬ್ಬಳ್ಳಿ ಸೋಮವಾರ ತಾರೀಖು ೨೫ — ೧೧ — ೧೯೪೬ [ ಸಂಚಿಕೆ ೩೦

# ಹಿಂದುಸ್ತಾನದಲ್ಲಿಯ ಜಾತೀಯ ತಿಕ್ಕಾಟ

## ಅದನ್ನು ನಿಲ್ಲಿಸಲು ಯೋಜಿಸತಕ್ಕ ಉಪಾಯಗಳು

### ಅಲ್ಪಸಂಖ್ಯಾಕ ಸಮಿತಿಗಳ ಸ್ಥಾಪನೆ, ಗೃಹರಕ್ಷಕ ದಲಗಳ ಸಂಘಟನೆ ಅವಶ್ಯ

### ರಾಜಕೀಯ ಸಮಸ್ಯೆಯೂ ಬಗೆಹರಿಯಬೇಕು

ಹಿಂದುಸ್ತಾನದಲ್ಲಿ ಇದೀಗ ಜಾತೀಯ ಗಲಭೆ ತಾಂಡವನೃತ್ಯ ಮಾಡುತಿದೆ. ಇದನ್ನು ಹೇಗೆ ನಿಲ್ಲಿಸಬೇಕೆಂಬ ಬಗ್ಗೆ ಸುವಿಚಾರಿಗಳು ತಲೆ ತುರಿಸಿಕೊಳ್ಳುತಿರುವರು. ಅಂಥವರಲ್ಲೊಬ್ಬರಾದ ಶ್ರೀ ಕೆ. ಸಂತಾನಂರು ಕೆಲ ಸೂಚನೆ ಮಾಡಿ ಬರೆಹ ಬರೆದಿದ್ದು ಅದನ್ನು ಕೆಳಗೆ ಕೊಡಲಾಗಿದೆ.

ಕಳೆದ ಅಗಸ್ಟ ತಿಂಗಳಿನಿಂದ ಪ್ರಾರಂಭವಾದ ಜಾತೀಯ ತಿಕ್ಕಾಟ ಬಂಗಾಲ ಮತ್ತು ಬಿಹಾರಗಳಲ್ಲಿ ವಿಪರೀತ ಅನಾಹುತವನ್ನೆಸಗಿದೆ; ಇಡೀ ರಾಷ್ಟ್ರದ ಶಾಂತಿ ಸುಖ ಸಮಾಧಾನಗಳು ಗಂಡಾಂತರದಲ್ಲಿ ಬಿದ್ದಿವೆ. ಈ ಸಂಬಂಧದಲ್ಲಿ ಬರೆಯುವುದು ಸಂತೋಷದ ಸಂಗತಿಯೇನು ಅಲ್ಲ. ಸದ್ಯದ ವಿಷಮ ಪರಿಸ್ಥಿತಿ ಮತ್ತಷ್ಟು ಕೆಡುವಂತಹ ಒಂದು ಶಬ್ದವನ್ನಾದರೂ ಹೆಚ್ಚಿಗೆ ಬರೆಯುವುದೆಂಥರೆ ಮಹಾಪರಾಧ ಮಾಡಿದಂತೆ. ಆದರೆ ಆ ಬಗ್ಗೆ ವಿಚಾರ ಮಾಡದೆ ಸ್ವಸ್ಥ ಕುಳಿತೂ ಅದನ್ನು ತಪ್ಪಿಸಿಕೊಳ್ಳಲಾರೆವು. ದೇಶದಲ್ಲಿಯ ಬುದ್ಧಿವಂತ ಜನರು ಕ್ಷಣಿಕ ರೊಚ್ಚನ್ನು ಬಿಟ್ಟುಗೊಟ್ಟು ಉಚ್ಚ ಭಾವನಾಪ್ರೇರಿತರಾಗಿ ಈ ತಿಕ್ಕಾಟದ ಬಗ್ಗೆ ವಿಚಾರ ಮಾಡಿ ನಿಷ್ಪಕ್ಷಪಾತ ದೃಷ್ಟಿಯಿಂದ ಇದರ ಮೂಲ ಕಾರಣಗಳನ್ನು ಹುಡುಕಲು ಅಸಮರ್ಥರಾದುದು ಸದ್ಯದ ತಿಕ್ಕಾಟ ಹೆಚ್ಚುವುದಕ್ಕೆ ಒಂದು ಕಾರಣವೆಂದು ಹೇಳಬಹುದು. ಪ್ರಚಂಡ ಪ್ರಮಾಣದಲ್ಲಿ ಸ್ತ್ರೀ ಪುರುಷ ಮಕ್ಕಳ ಕೊಲೆ ನಡೆದಾಗ ಶಾಂತರೀತಿಯಿಂದ ಈ ಸಮಸ್ಯೆಯ ವಿವರಣೆ ಮಾಡುವದು ಶಕ್ಯವಿಲ್ಲೆಂದು ವಾದಿಸಬಹುದು. ಪೋಲೀಸ ಮತ್ತು ಸೈನಿಕರು ಒಳ್ಳೆ ದಕ್ಷತೆಯಿಂದ ತಮ್ಮ ಕರ್ತವ್ಯ ಮಾಡಿದರೆ ಆಯಾ ಮುಖಂಡರು ಆಧ್ಯಾತ್ಮಿಕ ಮತ್ತು ಭಾವನಾತ್ಮಕ ಪ್ರಕಟನೆಗಳನ್ನು ಹೊರಡಿಸಿದ್ದಾದರೆ ಕೂಡಲೆ ಶಾಂತಿ ಪ್ರಸ್ಥಾಪಿತವಾಗಬಲ್ಲುದು. ಆದರೆ ಶಾಶ್ವತ ಪರಿಣಾಮಕಾರಕ ಉಪಾಯಗಳನ್ನು ಯೋಗ್ಯ ಸಮಂಜಸ ಕೆಳಹದಿಯ ಮೇಲೆಯೆ ಕೈಕೊಳ್ಳಬೇಕಾದುದು ಅವಶ್ಯ.

ಹಿಂದುಸ್ತಾನದ ಭವಿಷ್ಯತ್ತಿಗೆ ಹಿಂದು ಮುಸಲ್ಮಾನ ತಿಕ್ಕಾಟ ನಿಶ್ಚಿತವಾಗಿ ಗಂಡಾಂತರದ್ದಾಗಿದೆ. ಇದೊಳ್ಳೆ ನಾಚಿಕೆಯ ಮಾತು. ನಮ್ಮ ಜನಸಾಮಾನ್ಯರು ಇನ್ನೂ ಮಧ್ಯಯುಗದ ಪರಿಸ್ಥಿತಿಯಲ್ಲಿರುವುದು ಇದರ ಕಾರಣವೆಂದು ಹೇಳಬಹುದು. ಶಿಕ್ಷಣ ಮತ್ತು ಅರ್ಥಿಕ ಅಭಿವೃದ್ಧಿಯೆ ಇದಕ್ಕೆ ಕೊನೆಯ ಮದ್ದು. ಆದರೆ ಅನೇಕ ಹಿಂದು ಮುಸಲ್ಮಾನರ ನಾಳನಾಳಗಳಲ್ಲಿ ಬೇರೂರಿದ ಪರಸ್ಪರ ದ್ವೇಷಾಸೂಯೆಗಳನ್ನು ಕ್ಷಣಾರ್ಧದಲ್ಲಿ ಸಂಪೂರ್ಣವಾಗಿ ಕಿತ್ತೊಗೆಯುವೆವೆಂದೂ ನಾವು ಅಪೇಕ್ಷಿಸಕೂಡದು. ಇದಕ್ಕೆ ಹಲವು ವರ್ಷಗಳು ಹಿಡಿಯಬಹುದು.' ಆದರೆ ಕಾಲಕಾಲಕ್ಕೆ ಏಳಬಹುದಾದ ಈ ತಿಕ್ಕಾಟದಿಂದ ಜನತೆಯನ್ನು ರಕ್ಷಿಸುವುದು ಜಾಣತನದ ಮಾತು. ಯುದ್ಧದ ಗಂಡಾಂತರದಿಂದ ರಕ್ಷಿಸಿಕೊಳ್ಳುವುದಕ್ಕೆ ರಾಷ್ಟ್ರಗಳು ಬಹಳ ವೆಚ್ಚ ಸಹಿಸಿ ಸೈನ್ಯವನ್ನು ಇಡುತ್ತವೆ. ಇದೇ ತತ್ವವನ್ನನುಸರಿಸಿ ಕೇಂದ್ರ ಮತ್ತು ಪ್ರಾಂತಿಕ ಸರಕಾರಗಳು ಜಾತೀಯ ತಿಕ್ಕಾಟವನ್ನೆದುರಿಸಲು ಉಪಾಯಗಳನ್ನು ಯೋಜಿಸಬೇಕು. ಅಂತರಿಕ ಶಾಂತಿಯನ್ನು ಕಾಯ್ದುಕೊಳ್ಳಲು ಈ ವೆಚ್ಚವನ್ನು ವಹಿಸುವದು ಅವಶ್ಯವೆನಿಸುತ್ತದೆ. ೧) ಪ್ರತಿಬಂಧಕ, ೨) ಶಾಸಕ ಮತ್ತು ೩) ನಿವಾರಕ ಹೀಗೆ ಮೂರು ಬಗೆಯಿಂದ ಈ ಉಪಾಯಗಳನ್ನು ವಿಂಗಡಿಸಬಹುದು.

### ಪ್ರತಿಬಂಧಕೋಪಾಯಗಳು

ಪ್ರತ್ಯಕ್ಷ ತಿಕ್ಕಾಟ ಸಂಭವಿಸಹತ್ತಿದರೆ ರಾಜಕೀಯ ಪಕ್ಷಗಳು ಮತ್ತು ಮುಖಂಡರು ನಿಃಸಹಾಯಕರಾಗುವರು. ಮನುಷ್ಯನು ರೊಚ್ಚಿಗೆಳಸುವ ಮೊದಲು ಮುಖಂಡರು ಜನತೆಯ ಮೇಲೆ ಕೆಟ್ಟ ಮತ್ತು ಒಳ್ಳೆ ವರ್ಚಸ್ಸನ್ನು ಕೂಡಿಸಬಲ್ಲರು. ಆದರೆ ದೊಂಬಿ ಒಮ್ಮೆ ಪ್ರಾರಂಭವಾದರೆ ಬೇರೆ ಬೇರೆ ಕಾರಣಗಳಿಗಾಗಿ ಅದು ಒಮ್ಮೆಲೆ ಎಲ್ಲೆಡೆ ಹಬ್ಬುವುದು. ಕೇವಲ ಸೈನಿಕರ ಮತ್ತು ಪೋಲೀಸರ ಬಲಪ್ರಯೋಗದಿಂದಲೆ ಅದರ ಜೋರನ್ನು ಕಡಮೆ ಮಾಡಬಹುದು. ಪಾಶವೀ ಕೃತ್ಯಕ್ಕೆಳಸುವ ಬಗೆಯಲ್ಲಿ ರಾಜಕೀಯ ಪ್ರಚಾರಕಾರ್ಯವನ್ನು ನಡೆಸಬಾರದೆಂಬುದು ಇದರಿಂದ ಸಿದ್ಧವಾಗುತ್ತದೆ. ಇತ್ತ ಮುಖಂಡರು ಗಮನಕೊಡದಿದ್ದರೆ ಅವರು ತಮ್ಮ ಕರ್ತವ್ಯದಲ್ಲಿ ತಪ್ಪಿದಂತಾಗುವುದು. ರಾಜಕೀಯ ಧುರೀಣರು ಯಾವಾಗಲೂ ಬೆಂಕಿಯ ಗೂಡ ಚೆಲ್ಲಾಟ ನಡೆಸುತಿರುವರೆಂಬುದನ್ನು ಮರೆಯಲಾಗದು. ಒಮ್ಮೆ ರೊಚ್ಚಿಗೆದ್ದ ಜನರ ಭಾವನೆಗಳನ್ನು ಶಾಂತಗೊಳಿಸುವ ಹೊಣೆಯಿಂದಲೂ ಅವರು ಪಾರಾಗಲಾರರು. ಪ್ರಜಾಪ್ರಭುತ್ವ ರಾಷ್ಟ್ರಗಳಲ್ಲಿ ಕೇವಲ ಘಟನಾತ್ಮಕ ಚಟುವಟಿಕೆಗಳಿಗೆ ಬದ್ಧರಾಗುವದು ರಾಜಕೀಯ ಧುರೀಣರ ಕರ್ತವ್ಯ. ಬಹುಸಂಖ್ಯಾಕ ಜನರ ಬೆಂಬಲವನ್ನು ಪಡೆಯದೆ ಯಾವುದೊಂದು ಧೋರಣವನ್ನು ಪುರಸ್ಕರಿಸುವ ಅಧಿಕಾರ ಅವರಿಗಿಲ್ಲ. ಒಮ್ಮೆ ಇದು ದೊರೆಯಿತೆಂದರೆ ಶಕ್ತಿ ತಾನೇ ಬರುತ್ತದೆ. ಅದುದರಿಂದ ಹಿಂಸೆಯ ಯಾವದೇ ಬಗೆಯ ಗಂಡಾಂತರ ಒದಗುವಂತಹ ಪರಿಸ್ಥಿತಿಯನ್ನುಂಟು ಮಾಡಿಕೊಳ್ಳುವುದು ಮೂರ್ಖತನದ್ದಾಗುವದು. ಅಷ್ಟೇ ಅಲ್ಲ ಅಪರಾಧವೆನಿಸುವದು. ಪರಕೀಯ ಸರಕಾರದ ಗೂಡ ಅಥವಾ ಸ್ಥಳಿಕ ಆಳರಸ ಸರಕಾರದ ಗೂಡ ಹೋರಾಡುವುದು ಮತ್ತಷ್ಟು ಕಠಿನವಾಗಿದೆ. ಸಾರ್ವಜನಿಕ ಚಳವಳಿಯ ಯಶಸ್ಸಿಗೆ ನಿಯಮಿತ ಶಾಸನಬದ್ಧ ಮಾರ್ಗಗಳು ಯಾವುವೂ ಇಲ್ಲದ್ದರಿಂದ ಯಾವಾಗಲೂ ಹಿಂಸೆಯ ಗಂಡಾಂತರವಿದೆಂಬುದನ್ನು ತಿಳಿದೇ ನಡೆಯಬೇಕಾಗುವುದು. ಹಿಂದೀ ಸ್ವಾತಂತ್ರ್ಯ ಸಂಗ್ರಾಮವನ್ನು ಅಹಿಂಸಾತ್ಮಕವಾಗಿ ನಡೆಸಬೇಕೆಂದು ಮಹಾತ್ಮಾ ಗಾಂಧಿಯವರು ಯೋಜಿಸಿ ಹಾಗೆ ಅದನ್ನು ನಡೆಸಿದುದು ಅಪೂರ್ವ ಲಾಭವೆಂದು ಹೇಳಬಹುದು. ಅವರು ಅಷ್ಟೊಂದು ಪೂರ್ವಜಾಗ್ರತಿಯನ್ನು ವಹಿಸಿದರೂ ೧೯೧೯—೧೯೨೨ ಮತ್ತು ೧೯೪೨ ರಲ್ಲಿ ಹಿಂಸಾಕೃತ್ಯಗಳು ನಡೆದುವು. ಶಾಸನಬದ್ಧವಾಗದ ಯಾವದೇ ರಾಜಕೀಯ ಚಳವಳಿಯಲ್ಲಿ ಈ ಗಂಡಾಂತರವಿದ್ದೇ ಇದೆ. ಪಾಕಿಸ್ತಾನದ ಪ್ರಚಾರ ಮಾಡುವಾಗ ಹಿಂಸೆಯ ಕೃತ್ಯಗಳು ನಡೆಯದಂತೆ ಮುಸ್ಲಿಂಲೀಗಿನವರು ಅವಶ್ಯಕ ದಕ್ಷತೆಯನ್ನು ಮೊದಲೆ ತೆಗೆದುಕೊಳ್ಳದಿದ್ದುದರಿಂದ ಸದ್ಯದ ದುಃಸ್ಥಿತಿ ಪ್ರಾಪ್ತವಾಗಿದೆ. ಈ ಪ್ರಚಾರ ಮತ್ತು ಅದಕ್ಕೆ ವಿರುದ್ಧ ನಡೆಯುವ ಪ್ರಚಾರ ನಿಲ್ಲುವ ವರೆಗೆ ಇಲ್ಲವೆ ಅದನ್ನು ಯೋಗ್ಯರೀತಿಯಿಂದ ನಿಯಂತ್ರಿಸುವವರೆಗೆ ಸದ್ಯದ ತಿಕ್ಕಾಟವನ್ನು ತಡೆಯುವದು ಕಠಿನ ಮತ್ತು ಅಶಕ್ಯ. ಪತ್ರಿಕೆಗಳಲ್ಲಿ ಪ್ರಸಿದ್ಧವಾಗುತ್ತಿರುವ ಸುದ್ದಿ ಮತ್ತು ಅಭಿಪ್ರಾಯಗಳನ್ನು ನಿಯಂತ್ರಿಸುವುದೂ ಇದರಲ್ಲಿ ಅಡಕವಾಗುತ್ತದೆ. ಪ್ರಜಾಪ್ರಭುತ್ವವನ್ನು ಸಮೀಪಿಸಿದ ಸದ್ಯದ ಪ್ರಸಂಗದಲ್ಲಿ ಪತ್ರಿಕೆಗಳ ಮೇಲೆ ನಿರ್ಬಂಧ ಹಾಕುವದು ಇಷ್ಟವಾಗಿರದಿದ್ದರೂ ಜಾತೀಯ ಭಾವನೆಗಳನ್ನುದ್ರೇಕಿಸುವದಕ್ಕೆ ಅವಕಾಶ ಕೊಡುವದು ಹಾನಿಕರವಾಗಿದೆ. ಅದುದರಿಂದ ನಾಗರಿಕ ಮೂಲಭೂತ ಹಕ್ಕುಬಾಧ್ಯತೆಗಳಿಗೆ ಧಕ್ಕೆ ಬಾರದಂತೆ ಅವಶ್ಯಕ ಉಪಾಯಗಳನ್ನು ಯೋಜಿಸುವದು ಅವಶ್ಯವಾಗಿದೆ.

### ಅಲ್ಪ ಸಂಖ್ಯಾಕ ಸಮಿತಿಗಳು

ಸಪ್ರು ಸಮಿತಿಯ ಯೋಜನೆಯಲ್ಲಿ ಸೂಚಿತವಾದ ಅಲ್ಪ ಸಂಖ್ಯಾಕ ಸಮಿತಿಗಳನ್ನು ಸ್ಥಾಪಿಸುವದು ಈ ಸಂಬಂಧದಲ್ಲಿ ಇಷ್ಟವೆಂದು ನಾನು ಒತ್ತಾಯ ಪಡಿಸಬಯಸುತ್ತೇನೆ. ಕೇಂದ್ರ ಮತ್ತು ಪ್ರಾಂತಿಕ ಶಾಸನಸಭೆಗಳು ಸ್ವತಂತ್ರ ಅಲ್ಪ ಸಂಖ್ಯಾಕ ಸಮಿತಿಗಳನ್ನು ಸ್ಥಾಪಿಸಬೇಕು. ಶಾಸನ ಸಭೆಯಲ್ಲಿ ಪ್ರಾತಿನಿಧ್ಯ ಪಡೆದ ಪ್ರತಿಯೊಂದು ಜಾತಿಯ ಪ್ರತಿನಿಧಿ ಈ ಸಮಿತಿಗಳಲ್ಲಿರಬೇಕು. ಶಾಸನಸಭೆಯಲ್ಲಿಯ ಪ್ರತಿಯೊಂದು ಜಾತಿಯ ಪ್ರತಿನಿಧಿಗಳು ಒಬ್ಬ ಪ್ರತಿನಿಧಿಯನ್ನಾರಿಸಬೇಕು. ಈ ಪ್ರತಿನಿಧಿ ಶಾಸನಸಭೆ ಸದಸ್ಯನಾಗಿರಕೂಡದು. ಇಲ್ಲವೆ ಯಾವದೊಂದು ಪಕ್ಷದ ಸದಸ್ಯನಿರಕೂಡದು. ಈ ಅಲ್ಪ ಸಂಖ್ಯಾಕ ಸಮಿತಿಗಳ ಕೆಲಸಗಳು— (೧) ತಮ್ಮ ಪ್ರದೇಶದಲ್ಲಿ ಅಲ್ಪಸಂಖ್ಯಾಕ ಜಾತಿಗಳ ಹಿತಸಂಬಂಧಗಳ ಕಡೆಗೆ ಯಾವಾಗಲೂ ದಕ್ಷವಾಗಿರುವದು. (೨) ಕೇವಲ ಒಂದೆರಡು ಆಡಳಿತ ಕಾನೂನುಗಳನ್ನು ಇಲ್ಲವೆ ವೈಯಕ್ತಿಕ ಕಷ್ಟನಷ್ಟಗಳನ್ನು ವಿಚಾರ ಮಾಡದೆ ತಮ್ಮ ಕೆಲಸ ಮಾಡುವಾಗ ಅವಶ್ಯ ತೋರಿದ ಸಂಗತಿಗಳ ಬಗ್ಗೆ ವಿಚಾರ ಮಾಡುವದು. ಕೊನೆಯದಾಗಿ (೩) ಅಲ್ಪ ಸಂಖ್ಯಾಕರ ಹಕ್ಕು ಬಾಧ್ಯತೆಗಳ ಸಂಬಂಧದಲ್ಲಿ ಶಾಸನ ಸಭೆಗಳಲ್ಲಿ ಸ್ವೀಕರಿಸಲ್ಪಟ್ಟ ಧೋರಣೆ ಇಲ್ಲವೆ ಅಧಿಕಾರಿಗಳು ಕೈಕೊಂಡ ಕ್ರಮ ಮುಂತಾದ್ದನ್ನು ಆರು ತಿಂಗಳುಗಳಿಗೊಮ್ಮೆಯಾದರೂ ಪರಿಶೀಲಿಸುವದು. ಇಂಥ ಸಮಿತಿಗಳಲ್ಲಿ ಯಾವದೊಂದು ಜಾತಿಯ ಪ್ರತಿನಿಧಿಗಳು ಬಹುಮತದಲ್ಲಿರಬಾರದು. ಹಿಂದು ಮುಸಲ್ಮಾನ ತಿಕ್ಕಾಟದ ಸಂಬಂಧದಲ್ಲಿ ನಿಷ್ಪಕ್ಷಪಾತ ಧೋರಣ ವಹಿಸಬಹುದೆಂದು ತೋರುವ ಅಲ್ಪಸಂಖ್ಯಾಕ ಪಕ್ಷದ ಪ್ರತಿನಿಧಿಗಳೆ ಯಾವುದೊಂದು ನಿರ್ಣಯ ಕೈಕೊಳ್ಳುವಂತಿರಬೇಕು. ಈ ರೀತಿಯಾಗಿ ಈ ಸಮಿತಿಗಳು ಜಾತೀಯ ತಿಕ್ಕಾಟದ ಲಕ್ಷಣಗಳನ್ನು ದಕ್ಷತೆಯಿಂದ ಕಂಡುಹಿಡಿಯುವದಲ್ಲದೆ ಅವುಗಳನ್ನು ಹೋಗಲಾಡಿಸಲು ಉಪಾಯಗಳನ್ನು ಸೂಚಿಸಬೇಕು. ಈ ರೀತಿಯಾಗಿ ಮಾತ್ರವೆ ಪ್ರಚಾರಕಾರ್ಯವನ್ನು ಸಾಗಿಸಬೇಕು; ಈ ಮರ್ಯಾದೆಯನ್ನು ಯಾರೂ ಮೀರತಕ್ಕದ್ದಲ್ಲ ಎಂಬುದಾಗಿ ವಿಧಿಸಬೇಕು. ಪ್ರತ್ಯಕ್ಷ ದೊಂಬಿಗಳು ಪ್ರಾರಂಭವಾದರೆ ಆ ದೊಂಬಿಗಳನ್ನು ಹತ್ತಿಕ್ಕಲು ಈ ಸಮಿತಿಯವರು ಪೋಲೀಸ ಅಧಿಕಾರಿಗಳೊಡನೆ ಸಹಕರಿಸಬೇಕು. ನಿರರ್ಥಕ ಶಾಂತತಾಸಮಿತಿಗಳನ್ನು ಸ್ಥಾಪಿಸುವುದಕ್ಕಿಂತ ಮೇಲೆ ಹೇಳಿದ ರೀತಿಯಲ್ಲಿ ಸಮಿತಿಗಳನ್ನು ಸ್ಥಾಪಿಸುವುದು ಹೆಚ್ಚು ಉಪಯುಕ್ತವೆಂದು ನನಗನಿಸುತ್ತದೆ.

### ಹೊಣೆಗಾರಿಕೆ

ರಾಜಕೀಯ ಮತ್ತು ಆಡಳಿತದ ಹೊಣೆಗಾರಿಕೆಯನ್ನು ಹೇರುವದು ಪ್ರತಿಬಂಧಕ ಉಪಾಯಗಳಲ್ಲಿ ಒಂದೆಂದು ನಾನು ಸೂಚಿಸಬಯಸುತ್ತೇನೆ. ಯಾವ ಪ್ರಾಂತದಲ್ಲಿ ಭೀಕರ ಜಾತೀಯ ದೊಂಬಿ ಏಳುವುದೊ ಆ ಪ್ರಾಂತದ ಮುಖ್ಯ ಮಂತ್ರಿಗಳು ತಮ್ಮ ಹೊಣೆಗಾರಿಕೆಯಲ್ಲಿ ಅಯಶಸ್ವಿಯಾದರೆಂದು ತಿಳಿಯತಕ್ಕದ್ದು. ಕೂಡಲೆ ಅವರು ರಾಜೀನಾಮೆ ಕೊಟ್ಟು ಬೇರೆ ಯೋಗ್ಯ ಮನುಷ್ಯರಿಗೆ ಆ ಸ್ಥಳವನ್ನು ವಹಿಸಲು ಅವಕಾಶ ಕಲ್ಪಿಸಿಕೊಡಬೇಕು. ಮುಖ್ಯ ಮಂತ್ರಿಗಳು ಎಷ್ಟೇ ದಕ್ಷತೆಯಿಂದ ಆಡಳಿತ ಸಾಗಿಸಿದರೂ ಒಂದೊಂದು ಸಲ ಇಂಥ ದೊಂಬಿಗಳು ಸಂಭವಿಸಬಹುದು. ಅಂಥ ಪ್ರಸಂಗಗಳಲ್ಲಿಯೂ ಮೇಲೆ ಹೇಳಿದ ತತ್ವವನ್ನನುಸರಿಸುವದರಿಂದ ಯೋಗ್ಯ ಪರಿಣಾಮವುಂಟಾಗುವದು. ಅದೇ ರೀತಿಯಾಗಿ ದೊಂಬಿಗಳೆದ್ದ ಭಾಗದಲ್ಲಿಯ ಜಿಲ್ಹಾ ಮ್ಯಾಜಿಸ್ಟ್ರೇಟರು ಮತ್ತು ಪೋಲೀಸ ಸುಪರಿಂಟೆಂಡೆಂಟರು ಅಯೋಗ್ಯರೆಂದು ಗಣಿಸಿ ಅವರನ್ನು ಕಿತ್ತಿಯಾದರೂ ಹಾಕಬೇಕು ಇಲ್ಲವೆ ಬೇರೆ ಕಡೆಗೆ ವರ್ಗಾಯಿಸಬೇಕು.

### ಗೃಹರಕ್ಷಕ ದಲಗಳು

ದೊಡ್ಡ ಪ್ರಮಾಣದ ದೊಂಬಿಗಳನ್ನೆದುರಿಸಲು ಪೋಲೀಸ ದಳ ಸಾಕಷ್ಟು ಸಮರ್ಥವಿಲ್ಲೆಂಬುದು ಸ್ಪಷ್ಟವಿದೆ. ಆ ದಳವನ್ನು ಸಾಕಷ್ಟು ಹೆಚ್ಚಿಸುವದು ಬಹಳ ವೆಚ್ಚದ್ದಾಗುವದು ಅಶಕ್ಯವೂ ಎನಿಸಬಹುದು. ಅಂತರಿಕ ಅಶಾಂತಿಯನ್ನು ಹತ್ತಿಕ್ಕಲು ಸೈನಿಕರನ್ನು ಮೇಲಿಂದ ಮೇಲೆ

—೩ನೇ ಪುಟಕ್ಕೆ

# ಭಾದ್ರಪದ ಮಾಸದ ಕತೆಗಳು

( ಕಲಾಮಂಟಪ, ಬೆಳಗಾವಿ )

ಈ ತಿಂಗಳಲ್ಲಿ ಒಟ್ಟು ೬೭ ಕತೆಗಳು ಬಂದರೂ ಓದಲರ್ಹವಾದ ಕತೆಗಳ ಸಂಖ್ಯೆ ಕಡಿಮೆಯೆಂದೇ ಹೇಳಬೇಕು. ಕೆಲವನ್ನು ಸಣ್ಣ ಕತೆಗಳೆಂದು ಕರೆಯಲು ಸಂಕೋಚವೆನಿಸುವದು. ಕನ್ನಡದಲ್ಲಿ ಕತೆಗಳು ಹುಲುಸಾಗಿ ಬೆಳೆಯುತ್ತಿವೆ ಎಂಬ ಮಾತಿನ ಸಂಗಡ ಹುಲ್ಲೂ ಸಾಕಷ್ಟು ಸೇರಿಕೊಳ್ಳುತ್ತಿದೆ ಎಂದು ವಿಷಾದದಿಂದ ಹೇಳಬೇಕು. ನಮ್ಮ ಕತೆಗಾರರಿಗೆ ಜೀವನಾನುಭವ ಅಧಿಕವಿದ್ದಷ್ಟು ಹುಲ್ಲು ಕಡಿಮೆಯಾಗುವದೆಂದು ನಿರ್ಧಾರವಾಗಿ ಹೇಳಬಹುದು. ಅವುಗಳಲ್ಲಿ—

| | |
|---|---|
| ಅನುವಾದ | ೧೧ |
| ಪ್ರೇಮುಕಾಮು | ೧೭ |
| ಧ್ಯೇಯವಾದಿ | ೧೭ |
| ಇತರ | ೧೭ |
| ಒಳ್ಳೆಯವು | ೫ |
| ಒಟ್ಟು | ೬೭ |

ಅನುವಾದ ಕತೆಗಳ ಸಂಬಂಧ ಒಂದು ಮಾತು ಹೇಳುವದು ಅವಶ್ಯವೆನಿಸುವದು. "ಐದು ನಿಮಿಷ" ಎಂಬ ಹಿಂದೀ ಕತೆಯನ್ನು ಕೆ. ವಾಸುದೇವ ಶೇಣೈಯವರು ಮತ್ತು ರಾಮಚಂದ್ರ ಜೋಶಿಯವರು (ಕೊನೆಯ ಭೆಟ್ಟಿ ಎಂಬ ಹೆಸರಿನಿಂದ) ಅನುವಾದಿಸಿರುವರು. ಮೊದಲನೆಯವರು ತಮ್ಮದನ್ನು ಅಂತರಂಗ ಮತ್ತು ನವಯುಗದಲ್ಲಿ ಮುದ್ರಿಸಿಕೊಂಡಿರುವರು. ಇನ್ನೊಬ್ಬರು ಜಯಂತಿಯಲ್ಲಿ. ಜಯಂತಿಯಲ್ಲಿ ಮೊದಲು ಮುದ್ರಿತವಾದ ಮಾತನ್ನು ನಾವು ನಂಬಬೇಕು. ಹೀಗಿದು ವಾಸುದೇವರು ಅದನ್ನೇ ಅನುವಾದಿಸಿ ಎರಡು ಪತ್ರಿಕೆಗೆ ಏಕೆ ಕಳಿಸಿದರೋ ? ಉಭಯ ವಾರಪತ್ರಿಕೆಯ ಸಂಪಾದಕರು ಅದಕ್ಕೆ ಎಡೆ ಎಂತು ಕೊಟ್ಟರೊ ! ವಾಸುದೇವರು ಬಹಳ ಜನ ಓದಿ ಮೆಚ್ಚಲಿ ಎಂಬ ಮೋಹಕ್ಕೆ ಮನುಷ್ಯ ಧರ್ಮಕ್ಕನುಸರಿಸಿಕೊಂಡರೆಂದುಕೊಳ್ಳುವ ! ಅದೇ ನವಯುಗ ಮತ್ತು ಅಂತರಂಗದವರು ಬೇರೆ ಎರಡು ಕತೆಗಳಿಗೆ ಸ್ಥಳದೊರೆಯುವದಿದ್ದುದನ್ನು ಕಳೆದು ಬಿಟ್ಟರು. ನಮ್ಮ ವೃತ್ತಪತ್ರಿಕೆಯವರು ಏಕಮುಖದಿಂದ—ಒಬ್ಬರು ಇನ್ನೊಬ್ಬರ ಪತ್ರಿಕೆಯನ್ನು ಓದುತ್ತಿದ್ದರೆ—ವರ್ತಿಸಿದರೆ ಇಂಥ ತಪ್ಪು ಸಂಭವಿಸಲಾರದೆಂದು ನಮ್ಮ ನಂಬುಗೆ.

ಪ್ರೇಮುಕಾಮುದ ಕತೆಗಳಲ್ಲಿ ಜೀವನದಲ್ಲಿಯ ಲೀಲಾಬಾಯಿ ಕಾಮತರು ಬರೆದ ರಮಣೀ ಹೃದಯ ಕತೆ ಒಳ್ಳೆಯದು. ಕತೆಯ ವಸ್ತು—ಮಹಾರಾಷ್ಟ್ರ ಇತಿಹಾಸಕ್ಕೆ ಸಂಬಂಧಿಸಿದ ಚಂದ್ರರಾವ ಮೋರೆಯವರ ಮಗಳ—ಮೋಹಿನಿಯ—ಭಗ್ನಪ್ರೇಮವೆ ವಸ್ತು. ಕತೆಯು ಸುಂದರವಾಗಿ ಹಬ್ಬಿ ನಿಂತಿದೆ. ಆದರೆ ಇಂಥ ಸಂಗತಿಯಿಂದ ಕತೆಯನ್ನು ಬರೆಯದೆ ಚಿಕ್ಕ ಕಾದಂಬರಿಯನ್ನು ಜೋಡಿಸಿದರೆ ಒಳ್ಳೆಯದು. ನಾಟಕ ಅದಕ್ಕೂ ಒಳ್ಳೆಯದು. ಕತೆಗಾರನು ತನಗೆ ಸಿಕ್ಕ ವಸ್ತುವಿನಿಂದ ಕತೆಯನ್ನೇ ಬರೆಯಹೋದರೆ ಸೂಜಿಯಲ್ಲಿ ಸಣಬು ಪೋಣಿಸಿದಂತಾಗುವದು.

ಧ್ಯೇಯವಾದಿ ಕತೆಗಳಲ್ಲಿ ಕೆ. ಅನಂದ ರೈರು ಛಾಯಾದಲ್ಲಿ ಬರೆದ ಚಿನ್ನಪ್ಪನ ಹಲ್ಲು, ಅಂತರಂಗದಲ್ಲಿಯ ಕೆ. ಶಾಮುಶೆಟ್ಟಿಯವರ ಮೋಸದ ಮುಸುಕು, ಕೆ. ಶ್ರೀಕಂಠರ ಗರ್ಭದೊಳಗೆ, ಓದಲರ್ಹವಾದವುಗಳು. ಚಿನ್ನಪ್ಪನ ಹಲ್ಲಿನಲ್ಲಿಯ ವಸ್ತು ಅಸಂಭಾವ್ಯವು. ಸಂಭವಿಸಬಹುದೆನ್ನುವಂತೆ ಬರೆದ ಕತೆಗಾರರ ಜಾಣ್ಮೆಯನ್ನು ಮೆಚ್ಚಬೇಕು. ಮೋಸದ ಮುಸುಕಿನಲ್ಲಿ ಅಧಿಕಾರಿಗಳ ಮುತವರ್ಜಿಯನ್ನು ಕೆಳವರ್ಗದವರು ಸಂಪಾದಿಸಬೇಕೆಂದು ಹೆಣಗಿ ಮೋಸ ಹೋಗುವದು ಸ್ವಾಭಾವಿಕ. ಗರ್ಭದೊಳಗಿನ ಸಂಗತಿಯು ಸಿನೇಮಾ ಸೃಷ್ಟಿಗೆ ಸಂಬಂಧಿಸಿದುದು. ಭಾವನಾದೇವಿಯು ತಾಯತನದ ಒಂದು ಪ್ರಸಂಗವನ್ನು ಅಭಿನಯಿಸಬೇಕಾಗುವದು. ಸದಾಶಿವನು ಮಗನಾಗಿ ಸಿಕ್ಕನು. ದೇವಿಯು ಸದಾನನ್ನು ಹೊಟ್ಟೆಯ ಮಕ್ಕಳನ್ನು ಪಾಲಿಸುವ ತಾಯಿಗೂ ಮಿಗಿಲಾಗಿ ನಿಂತು ಲಲ್ಲೆಗೈಯಹತ್ತಿದಳು. ಸಿನೇಮಾ ಪ್ರಯೋಗ ನಡೆಯಿತು. ದೇವಿಯು ಅಭಿನಯ ವಿಶಾರದೆಯಾಗಿ ವರ್ತಿಸಿದಳು. ಸಂಚಾಲಕರು ಸಂತುಷ್ಟರಾದರು. ಇನ್ನೇನು ಉಳಿಯಿತು ! ಆದರೆ ಮಗು ಒಬ್ಬ ಪೇದೆಯ ಕಾಲಕೆಳಗೆ ಸಿಕ್ಕು ಸತ್ತಿತು. ಸಿನೇಮಾದಲ್ಲಿ ಸಾಯಬೇಕಿತ್ತೋ ಇಲ್ಲವೋ ತಿಳಿಯದು. ಕಲ್ಪಕ ಕಲಾಮಯ ಸೃಷ್ಟಿಯೆನಿಸುವ ಸಿನೇಮಾದಲ್ಲಿ ಮಗು ಸಾಯಬಾರದೆಂದಿದ್ದರೂ ಇಲ್ಲಿಯ ಸತ್ಯಸೃಷ್ಟಿಯಲ್ಲಿ ಸತ್ತಿತು. ವಾಸ್ತವ ಸೃಷ್ಟಿಯಲ್ಲಿ ಸಾಯಬಹುದಾದ—ಅದೇಕೆ ಸತ್ತ—ಹುಡುಗನು ಸಿನೇಮಾ ಸೃಷ್ಟಿಯಲ್ಲಿ ಸಾಯಬಾರದೆಂದು ಪ್ರಯತ್ನಿಸಿದರೆ ವಾಸ್ತವದ ಅಣಕವಾಗುವದಲ್ಲವೇ? ಕತೆಯನ್ನು ಅತಿ ವಾಸ್ತವಮಾಡ ಹೋಗಿ ಒಬ್ಬ ಮಗುವನ್ನು ಬಲಿಕೊಟ್ಟಂದಾಯಿತು.

ವಾಣಿಯಲ್ಲಿಯ ಅ. ಸೋಗಾಲರ ಮಾತಾನಮೋ ಕತೆಯು ಚಿಕ್ಕದು.— ಒಬ್ಬ ಶ್ರೀಮಂತ ಭಿಕ್ಷುಕಿಯನ್ನು ಕರೆದನು. ಆಕೆ ಒಪ್ಪಲಿಲ್ಲ. ಕಡೆಗೆ ಆಕೆಯ ಹಸಿದ ಹೊಟ್ಟೆ ಶ್ರೀಮಂತನ ಮುಂದೆ ಎಳೆದು ತಂದು ನಿಲ್ಲಿಸಿತು. ಅವನು ಮಾತಾನಮೋ ಎಂದನು. ಕತೆಯೆಂದ ಮೇಲೆ ಒಂದು ವ್ಯಾವಹಾರ್ಯ ಸಂಗತಿ ಬೇಕು, ಪಾತ್ರಗಳಲ್ಲಿ ಜೀವಕಳೆ ಬೇಕು. ಭಾವನೆಯ ಪ್ರಕಟನೆಗೆ ಶಬ್ದಸಮುದಾಯ ಬೇಕು. ಕೊನೆಗೆ ಇವೆಲ್ಲವನ್ನು ಸಿದ್ಧಿಗೆ ಒಯಿದು ಮುಟ್ಟಿಸಲು ಕಲಾಮಯ ಕೈಚಳಕ ಬೇಕು. ಕತೆಯಲ್ಲಿ ಎಲ್ಲ ಕೊರತೆ. ಕೊನೆಯಲ್ಲಂತೂ ಭಾವದ ಕತ್ತು ಹಿಸುಕಿದಂತೆನಿಸುವದು.

ಮತ್ತು ಪ್ರಜಾಮತದಲ್ಲಿಯ ರಾಮಮೋಹನ ಮೂಡಬಿದ್ರಿಯವರ ಪರಿವರ್ತನೆ, ಸಂಜಯದಲ್ಲಿಯ ಅ. ಸುಬ್ಬರಾಯರ ಜೀವನ ಮತ್ತು ಕರ್ಮವೀರದಲ್ಲಿಯ ಎಸ್. ವೆಂಕಟೇಶರ ವಸುಂಧರಾಜೀವನ ವಾಚನಾರ್ಹವಾದವುಗಳು. ಆದರೆ ಮೂಡಬಿದ್ರಿಯವರ ಕಥಾನಾಯಕ ಮುರಲಿಯು ಮೇರಿ-ವೇಶ್ಯೆಯಳ ಮನೆಗೆ ಗೆಳೆಯರ ಮೋಸದಿಂದ ಪ್ರವೇಶಿಸಲು ಅವಳು ಪಾವನಳಾದಳಂತೆ. ಆಕೆಯ ಮನೆಯು ಒಂದು ಗೋಶಾಲೆಯಾಗಿ ಪರಿಣಮಿಸಿತಂತೆ. ಸಣ್ಣ ಕತೆಗಳಲ್ಲಿ ಇಂಥ ಟ್ರಾನ್ಸಫರ ಸೀನರಿ ಕೂಡದು. ಸುಬ್ಬರಾಯರ ಜೀವನ ನೀಳ್ಗತೆಯು. ಕಥಾನಾಯಕ ಕುಡುಕ ಕೊಲೆಗಡಕನಾಗಿ ಫಾಸಿಯನ್ನು ಏರುವ ಮುಂದೆ-ಈ ಪ್ರಪಂಚದಲ್ಲಿ ಸುಖವಾಗಿ ಧನ, ಮಾನ, ಪ್ರಾಣಗಳನ್ನು ಉಳಿಸಿಕೊಂಡು ಬಾಳಲು ಸ್ವಾರ್ಥಿಯಾಗಿರುವದೇ ಲೇಸು-ಎಂದು ಹೇಳಿದ Confession ವನ್ನು ನಾವು ನಂಬಲಾರೆವು. ಸಾಯುವ ಮುಂದೆ ಹೀಗೆ ನುಡಿಯುವದು ಅಸಂಭವ. ಒಂದೆರಡು ಒಳ್ಳೆಯ ಮಾತು ಬೇಕು. ಕಡೆಗೆ ರಾಮ ಆದರೂ ಸರಿ. ವೆಂಕಟೇಶರ ಕಥಾನಾಯಕ ಡಾಕ್ಟರರು ಒಳ್ಳೆಯ ಪಾತ್ರ.

## ಭಾದ್ರಪದ ಪಟ್ಟಿ

೧. ಕರ್ಮವೀರದಲ್ಲಿಯ ಶ್ರೀಕೃಷ್ಣ ಪಾಟೀಲರ ಒಡೆಯಾರ.

ಒಡೆಯಾರ (ಪುರಂಧರ) ದರವಡೆಗಾರರ ದಾಳಿಗೆ ೭-೮ ಸಾರೆ ಸಿಕ್ಕು ಪೆಟ್ಟು ತಿನ್ನುವನು. ಅಣ್ಣಂದಿರು ಸತ್ತು ಹೋಗುವರು. ಹಣವು ಸಹ ಬಳಿದು ಹೋಗುವದು. ಹೀಗೆ ಹಿನ್ನೆಲೆಯಾಗಿದ್ದು ತಾನು ಊರು ಬಿಟ್ಟಾನೆ ಹೊರತು ಸರ್ವಾರ್ಪಣೆಗೆ ಸಿದ್ಧನಾಗಲಾರನು. ಆದರೆ ಪುರಂಧರನು ಅತಿತ್ವವನ್ನು ಸ್ವೀಕರಿಸಿ ಸರ್ವಾರ್ಪಣೆ, ಆತ್ಮಾರ್ಪಣೆಗೆ ಅಣಿಯಾದನು. ವಾಸ್ತವವಾದಿಗಳಿಗೆ ಇದೊಂದು ಅದ್ಭುತ.

೨. ಕರ್ನಾಟಕಬಂಧುವಿನಲ್ಲಿಯ ಕ. ರಾ. ಸತ್ಯನಾರಾಯಣ ಅಯ್ಯರರ ಅಲಿಯ ರಂಜಾನ.

ಪೋಲಿ ಖಾಸಿಂನು ತಂದೆ ಅಲಿಯ ಕಿಟಕಿಟಿಗೆ ಊರು ಬಿಟ್ಟು ಮಿಲಿಟರಿ ಸೇರುವನು. ಮರುವರುಷದ ರಂಜಾನಕ್ಕೆ ತಂದೆ-ತಾಯಿಗಳಿಗೆ ಮಗನಿಲ್ಲದೆ ಸಂಕಟವಾಗುವದು. ಹೊಟ್ಟೆಯ ಪಾಡಿಗೆ ತಂದೆ ಕೂಲಿ ಮಾಡಹತ್ತಿದ. ರಂಜಾನ ದಿನ ಸಹ ಕೂಲಿ! ಖಾಸಿಂ ಮಿಲಟರಿ ಸಮವಸ್ತ್ರದಲ್ಲಿ ರಂಜಾನ್ ದಿನ ತಂದೆಯ ಭೆಟ್ಟಿಗೆ ಬಂದ. ತಂದೆ ಕೂಲಿ, ಕೂಲಿ ಅಂದ. ಮಗ ತಂದೆಯನ್ನು ಅಪ್ಪಿಕೊಂಡ.—ಮಗ ಎಷ್ಟೇ ಸಿಟ್ಟು ಮಾಡಿದರೂ—ಹೋದರೂ ತಂದೆ-ತಾಯಿಗಳ ಸಂಬಂಧವನ್ನು ಪತ್ರಮುಖದಿಂದಲಾದರೂ ಇಟ್ಟುಕೊಳ್ಳುವನು. ಹೀಗೆ ಓಡಿ ಹೋದವರ ಅನುಭವ ಸಾಕಷ್ಟು ಉಂಟು. ಆದರೆ ಇಲ್ಲಿಯ ಖಾಸಿಂನ ರೀತಿ ಚಮತ್ಕಾರವಾದುದು.

೩. ಕತೆಗಾರದಲ್ಲಿಯ ಎನ್. ಸೂರಪ್ಪನವರ ನಮ್ಮ ಸಂಘ.

ವಿಜಯನಗರದವರಿಗೆ ಸಂಬಂಧಿಸಿದ ತಿಮ್ಮನಾಯಕನ ಕೂಡ ತುಳುವ ನರಸಿಂಹನು ಯುದ್ಧ ಹೂಡಿದ. ತಿಮ್ಮನಾಯಕನು ತನ್ನ ಸಾಹಸವನ್ನು ತೋರಹೋಗಿ ತುಳುವನ ಕುದುರೆಯನ್ನು ಕದ್ದ. ತುಳುವನು ನಾಯಕನ ಅದ್ಭುತ ಪರಾಕ್ರಮಕ್ಕೆ (ಮೆಚ್ಚಿ) ಹಣ್ಣಾಗಿ ಪಾಳಯವನ್ನು ಕಿತ್ತಿಕೊಂಡು ಹೋದ. ಸತ್ಯ ಸಂಗತಿ (?) ಯಾದರೂ ಕತೆಯು ಅದ್ಭುತವಾದುದು.

೪. ಕರ್ಮವೀರದಲ್ಲಿಯ ನಾ. ಹ. ದೇಶಪಾಂಡೆಯವರ ಸ್ವಪ್ನ ಮಂದಿರದಲ್ಲಿ.

ನೀಮಾತಾಯಿ ಉದಿತ ಕತೆಗಾರ್ತಿ. ಆಶಾ ಕತೆಯನ್ನು ಮನೋಹರ ಮಾಸಿಕಕ್ಕೆ ಕಳಿಸುವಳು. ತನ್ನ ಫೋಟೋವನ್ನು ಸಂಪಾದಕರು ಬೇಡಿದಂತೆ, ತನ್ನ ಓರಗೆಯವರು ಹೊಗಳಿದಂತೆ ಹಗಲು ಕನಸು ಕಾಣುವಳು. ಆದರೆ ಕತೆಯನ್ನು ನಿರಾಕರಿಸಲಾಗಿದೆಯೆಂದು ಪೋಷ್ಟಮನ್ನನು ತಂದು ಕೊಡುವನು. ಹೆಣ್ಣುಮಕ್ಕಳ ಲೇಖಗಳನ್ನು ನಿರಾಕರಿಸುವ ಸಂಪಾದಕರು ನಮ್ಮಲ್ಲಿ ವಿರಳ. ಒಂದು ರೀತಿಯಿಂದ ಇದು ಯೋಗ್ಯಮಾರ್ಗ. ದೇಶಪಾಂಡೆಯವರು ನಿರಾಕರಿಸಿ ನೀಮಾತಾಯಿಯನ್ನು ಸಾಹಿತ್ಯಕ್ಷೇತ್ರದಿಂದ ಹೊರಹಾಕಿರುವರು. ಆಕೆ ಮುಂದೆ ಬರೆಯುವದನ್ನು ಬಿಟ್ಟಳು. ನೀಮಾಳ ಸ್ಥಳದಲ್ಲಿ ಗಂಡಸು ಕತೆಗಾರನನ್ನು ಹಾಕಿದ್ದರೆ ಇನ್ನಷ್ಟು ಒಳಿತಾಗುತ್ತಿದ್ದಿತು.

೫. ಛಾಯಾದಲ್ಲಿಯ ಸೂ. ವೆಂಕಟರಾಮಯ್ಯರ ಗೆಳೆಯನಿಗೆ ಕಾಣಿಕೆ

ಅನಂದ, ಸೀತಾರಾಮರು ಪರಮಸ್ನೇಹಿತರು. ಒಂದು ಚೇಷ್ಟೆಯಲ್ಲಿ ಮಾತು ಬಿಟ್ಟರು. ಮೂರು ವರುಷ ಮಾತು ಬಿಟ್ಟರು. ಇಷ್ಟು ಸಮಯವೂ ಉಭಯತರು ಸಂಕಟ ಪಟ್ಟರು. ಮುಂದೆ ಅಕಸ್ಮಾತ್ತಾಗಿ ಭೆಟ್ಟಿಯಾದರು. ಮಾತಾಡಿದರು. ಅನಂದ ತನ್ನ ಕಳವಳವನ್ನು ತಿಳಿಸಿದ. ಸೀತಾರಾಮನು ಸಹ ಬರಹಮುಖದಿಂದ ಪ್ರಕಟಿಸಿದ.

ಕತೆಯ ವಸ್ತು ಇಷ್ಟಿದ್ದರೂ ಗೆಳೆತನದ ಒಂದು ಸೂಕ್ಷ್ಮ ಸವಿಯನ್ನೂ ಅಗಲುವಿಕೆಯ ವ್ಯಥೆಯನ್ನೂ ಮಾರ್ಮಿಕವಾಗಿ ಹೇಳಿರುವರು. ಕತೆಯು ಒಂದು ಸೂತ್ರದಲ್ಲಿ ಬೆಳೆದು ಬಂದಿದೆ. ಗೆಳೆತನದ ರುಚಿಯನ್ನು ಉಂಡವರು ಕತೆಯನ್ನು ಮೆಚ್ಚಬೇಕು.

ಈ ಸಾರೆಯ ಬರದು ಕತೆಗಳಲ್ಲಿ ಇದಕ್ಕೇ ಪಟ್ಟಗಟ್ಟಬೇಕು.

## ಕಾವ್ಯ ತರಂಗಿಣಿ

### ತಿರುಪೆಯ ಚೆನ್ನ

ಹಳಸಿದ ಪಲ್ಯ, ಹುಳಸಿದ ಅನ್ನ
ಗುಳುಗುಳು ನುಂಗಿದ ತಿರುಪೆಯ ಚೆನ್ನ
ಮಳಮಳಗುಟ್ಟಿತು ಹೊಟ್ಟೆಯ ಜೀವ
ತಳಮಳಗೊಂಡನು ತಿರುಪೆಯ ಚೆನ್ನ

ಒರಗಿದ ಮಾರ್ಗದ ಪಕ್ಕದೊಳಲ್ಲಿ
ನೆನಹಿಗೆ ತಂದನು ಹೆಂಡತಿ ಮಲ್ಲಿ
ಹಳಸಿದ ಅನ್ನವನೆಳಸಿಯೆ ಅವಳು
ತೊರೆದಳು ಜಗವನು ಹರೆಯದಲವಳು

ಅಯ್ಯೋ ! ಚೆನ್ನ ತಾಳನು ಬನ್ನ
ಹೊಟ್ಟೆಯ ತಣಿವಿಗೆ ಹಳಸಿದ ಅನ್ನ !
ದಾನವಂತ ಜನಜಂಗುಳಿಯಿತ್ತು
ಗಳಿಸಿತು ಪುಣ್ಯದ ಪಣ್ಯದ ಸೊತ್ತು !!

ಎತ್ತ ಸರಿದರೂ ಹಸಿವೆಯ ಸುತ್ತು
ಬಡವರ ಒಡಲಿಗೆ ಕೊಡಲಿಯ ಕುತ್ತು
ಎಡೆಗಾಣದೆ ನಡುನಡುಗಿದ ಚೆನ್ನ
ಬಡಬಡ ಕಾರಿದ ಹಳಸಿದ ಅನ್ನ

—ಪಿ. ಟಿ. ಕುಲಕರ್ಣಿ.

* * * *

### ನಾ ಮೊದಲೊ ನೀ ಮೊದಲೊ?

ನಾ ಮೊದಲೊ
ನೀ ಮೊದಲೊ ದೇವಾ......

ಜಡವು ಕಂಡಿತೊ ಮೊದಲೊ
ಜೀವ ಹುಟ್ಟಿತೊ ಮೊದಲೊ
ಜಡ-ಜೀವಿಗಳ ತೊಡಕುಗಳ
ಬಿಡಿಸುವುದು ಮೊದಲೊ

ನಾ ಮೊದಲೊ
ನೀ ಮೊದಲೊ ದೇವಾ...... ೧

ಬೆಳಕು ನೋಡಿತೊ ಜಗವ
ಇರುಳು ಮುಚ್ಚಿತೊ ಜಗವ
ಇರುಳು—ಬೆಳಗಿನ ಗಹನ
ಬಿಡಿಸುವುದು ಮೊದಲೊ

ನಾ ಮೊದಲೊ
ನೀ ಮೊದಲೊ ದೇವಾ...... ೨

ಹುಟ್ಟು ಸತ್ತಿತೊ ಮೊದಲೊ
ಸಾವು ಹುಟ್ಟಿತೊ ಮೊದಲೊ
ಹುಟ್ಟು—ಸಾವಿನ ಬಿಗುವ
ಬಿಚ್ಚುವುದು ಮೊದಲೊ

ನಾ ಮೊದಲೊ
ನೀ ಮೊದಲೊ ದೇವಾ...... ೩

ಲಿಂಗ ನಿಂತಿತೊ ಮೊದಲೊ
ಬಿಂಬ ಮೂಡಿತೊ ಮೊದಲೊ
ಲಿಂಗ—ಬಿಂಬದ ಗುಹ್ಯ
ಒಡೆಯುವುದು ಮೊದಲೊ

ನಾ ಮೊದಲೊ
ನೀ ಮೊದಲೊ ದೇವಾ...... ೪

ನನ್ನ ಅರಿವದು ಮೊದಲೊ
ನಿನ್ನ ಇರವದು ಮೊದಲೊ
ನನ್ನಿನ್ನ ಅರಿಯಿರವ
ತೊಡಕೊಡೆಯು ಮೊದಲೊ

ನಾ ಮೊದಲೊ
ನೀ ಮೊದಲೊ ದೇವಾ...... ೫

—ಶ್ರೀಕೃಷ್ಣ ಪಾಟೀಲ





## ದ್ವೇಷಾಗ್ನಿಯನ್ನು ನಂದಿಸಿರಿ

ಹಿಂದುಸ್ತಾನದ ಬಹುಭಾಗದಲ್ಲಿ ಇಂದು ದ್ವೇಷಾಸೂಯೆಗಳ ಕಾಳ್ಗಿಚ್ಚು ತಾಂಡವನೃತ್ಯವಾಡುತಿದೆ. ಎಲ್ಲಿ ನೋಡಿದಲ್ಲಿ ಕೊಲೆ, ಕೊಳ್ಳಿ, ಸುಲಿಗೆಯ ಸುದ್ದಿ ಕೇಳಿಬರುತಿವೆ. ಆಯಾ ಸರಕಾರದವರು ಪ್ರಯತ್ನ ಮಾಡಿದರೂ ಪುಂಡರು ಪುಂಡತನದ ಕೃತ್ಯಗಳನ್ನು ಮಾಡಹತ್ತಿದ್ದಾರೆ. ಇದರಿಂದ ಯಾರ ವಿತ್ತ ಜೀವಿತಗಳೂ ಇಂದು ಸುರಕ್ಷಿತವಾಗಿಲ್ಲ. ಮಾನವ ತನ್ನ ಉಚ್ಚನೈತಿಕ ಮಟ್ಟನ್ನು ಬಿಟ್ಟು ಪಾಶವೀ ವೃತ್ತಿಗಿಳಿದುದನ್ನು ನೋಡಿ ಸುಸಂಸ್ಕೃತರನೇಕರು ಕಳವಳವನ್ನು ವ್ಯಕ್ತಮಾಡುತ್ತಾರೆ. ಪ್ರಾಚೀನ ಕಾಲದಿಂದಲೂ ಒಳ್ಳೆ ಸುಸಂಸ್ಕೃತ ಮತ್ತು ಆದರ್ಶ ರಾಷ್ಟ್ರವೆಂದು ಹೆಮ್ಮೆಪಡುತಿರುವ ಹಿಂದುಸ್ತಾನ ಇಂದು ಈ ಬಗೆಯ ಅಧೋಗಿಳಿದುದು ಮತ್ತಷ್ಟು ತಳಮಳವನ್ನುಂಟುಮಾಡುವಂತಹ ಸಂಗತಿ. ಇಂತು ಕಳವಳಗೊಂಡವರಲ್ಲಿ ಒಬ್ಬರಾದ ಡಾ. ಝುಕೀರ ಹುಸೇನರು ಜಾಮಿಯಾ ಇಸ್ಲಾಮಿಯದ ರಜತೋತ್ಸವದ ಕಾಲಕ್ಕೆ ತಮ್ಮ ಅಂತಃಕರಣವನ್ನು ಬಿಚ್ಚಿ ಹೇಳಿ ಅಲ್ಲಿಯ ವ್ಯಾಸಪೀಠದ ಮೇಲೆ ವಿರಾಜಮಾನರಾಗಿದ್ದ ಮುಖಂಡರಿಗೆ ಈ ದ್ವೇಷಾಗ್ನಿಯನ್ನು ನಂದಿಸಲು ಕಳಕಳಿಯ ಬಿನ್ನಹ ಮಾಡಿಕೊಂಡರು. 'ಇಂದು ಈ ದೇಶದಲ್ಲಿ ಹೊತ್ತಿರುವ ಪರಸ್ಪರ ದ್ವೇಷಜ್ವಾಲೆಯನ್ನು ನೋಡಿದಲ್ಲಿ ಈ ದೇಶದ ಸಾಂಸ್ಕೃತಿಕ ಜೀವನವನ್ನು ಅಲಂಕರಿಸಲು ನಾವು ನಡೆಸಿದ ಪ್ರಯತ್ನವು ಮೂರ್ಖತನದ್ದು, ವ್ಯರ್ಥವೆಂದು ಎನಿಸುವದು. ಈ ಜ್ವಾಲೆಗಳು ನಾಗರಿಕತೆಯನ್ನು ಧ್ವಂಸಗೊಳಿಸುತ್ತಿವೆ. ಮಾನವರು ಪಶುಗಳಿಗಿಂತಲೂ ಕೆಳಗಿನ ಮಟ್ಟಕ್ಕೆ ಇಳಿದ ಈ ಸ್ಥಿತಿಯಲ್ಲಿ ನಾವು ಮಾನವೀಯ ಮಹತಿಯನ್ನು ಪೋಷಿಸುವುದೆಂತು?' ಎಂದು ಡಾಕ್ಟರ ಸಾಹೇಬರು ಕೇಳಿದ್ದು ಯಥಾರ್ಥವಾಗಿದೆ. ಭಾರತದಲ್ಲಿಯ ಪುಂಡಾಟಿಕೆಯನ್ನು ನೋಡಿದರೆ ಪಶುಗಳಿಗಿಂತ ಹೀನ ಕೃತ್ಯಗಳನ್ನು ಈ ಪುಂಡರು ಎಸಗುತ್ತಿರುವರೆಂಬುದು ಸ್ಪಷ್ಟವಾಗುತಿದೆ. ಈ ಪುಂಡಾಟಿಕೆಯನ್ನು ತಡೆಯಲು ತಮ್ಮಂಥ ಮುಖಂಡರೇ ಸಮರ್ಥರಿರುವಿರೆಂದು ಡಾಕ್ಟರ ಝುಕೀರರು ಅಲ್ಲಿ ವ್ಯಾಸಪೀಠದ ಮೇಲಿದ್ದವರನ್ನುದ್ದೇಶಿಸಿ ಬಿನ್ನವಿಸಿದ್ದು ಅತ್ಯಂತಮಹತ್ವದ್ದಾಗಿದೆ. ಅವರು ಅಭಿಪ್ರಾಯ ಪಟ್ಟಂತೆ ಆಯಾ ಜಾತೀಯ ಮುಖಂಡರು ಒಟ್ಟಿಗೆ ಕೂಡಿ ಪ್ರಯತ್ನಿಸಿದರೆ ಕ್ಷಣಾರ್ಧದಲ್ಲಿ ಈ ಕಾಳ್ಗಿಚ್ಚು ನಂದುವದು. ಭಾರತೀಯರ ಮೇಲೆ ಆಯಾ ಜಾತಿಗಳ ಮುಖಂಡರ ವರ್ಚಸ್ಸು ಇನ್ನೂ ಅಷ್ಟಿದೆ. ಆದರೆ ಮುಖಂಡರಲ್ಲಿಯೆ ಒಮ್ಮತವಾಗದಿದ್ದುದು ದೇಶದ ದುರ್ದೈವವು. ಡಾ. ಝುಕೀರ ಹುಸೇನರ ಬಿನ್ನಹದಂತೆ ಜಾತೀಯ ಮುಖಂಡರಿಗೆ ಬೇಗ ಸುಬುದ್ಧಿ ಉಂಟಾಗಿ ಈ ದ್ವೇಷಾಗ್ನಿಯನ್ನು ನಂದಿಸುವಲ್ಲಿ ಅವರು ಅಣಿಯಾಗಲೆಂದು ಹಾರಯಿಸುತ್ತೇವೆ.

## ನ್ಯಾಯ್ಯ ಧೋರಣವಲ್ಲ

ಹಿಂದುಸ್ತಾನದ ಯಾವದೇ ಭಾಗದಲ್ಲಿ ಯಾವದೇ ಜಾತಿಯ ಜನರಿಂದ ನಡೆದ ಗಲಭೆಗಳನ್ನು ನಿಷ್ಪಕ್ಷಪಾತವಾಗಿ ಖಂಡಿಸುವುದು ಸಮಂಜಸವೃತ್ತಿಯ ಪ್ರತಿಯೊಬ್ಬನ ಕರ್ತವ್ಯವಾಗಿದೆ. ಪೂರ್ವ ಬಂಗಾಲ, ಬಿಹಾರ, ಕಲಕತ್ತೆಗಳಲ್ಲಿ ಸಂಭವಿಸಿದ ಪ್ರಚಂಡ ಪ್ರಮಾಣದ ಪುಂಡಾಟಿಕೆಗಳನ್ನು ಖಂಡಿಸುವುದವಶ್ಯವಾಗಿದೆ. ಕಾಂಗ್ರೆಸ ಮತ್ತು ಲೀಗೇತರ ಮುಖಂಡರು ಈ ರೀತಿ ಎಲ್ಲ ಕಡೆಯ ಗಲಭೆಗಳನ್ನು ಖಂಡಿಸುತಿರುವರು. ಆದರೆ ಲೀಗ ಮುಖಂಡರು, ವಿಶೇಷತಃ ಜಿನ್ನಾ ಸಾಹೇಬರು ತಮ್ಮ ಪ್ರಕಟನೆಗಳಲ್ಲಿ ನೌಖಾಲಿ ತಿಪ್ಪೇರಾಗಳಲ್ಲಿ ನಡೆದ ಪುಂಡಾಟಿಕೆಯನ್ನು ಸ್ಪಷ್ಟ ಶಬ್ದಗಳಲ್ಲಿ ಖಂಡಿಸದೆ ಮೇಲಿಂದ ಮೇಲೆ ಬಿಹಾರದಲ್ಲಿಯ ಹತ್ಯಾಕಾಂಡವನ್ನೆ ಖಂಡಿಸುತ್ತಿರುವುದು ನಿಜವಾಗಿಯೂ ನ್ಯಾಯ್ಯವಲ್ಲ. ಹೀಗೆ ಹೇಳುವುದರಿಂದ ಬಿಹಾರದಲ್ಲಿಯ ಅತ್ಯಾಚಾರವನ್ನು ಖಂಡಿಸಬಾರದೆಂದು ನಾವು ಹೇಳಬಯಸುವುದಿಲ್ಲ. ಅಲ್ಲಿ ನಡೆದ ಅನರ್ಥವನ್ನು ನಾವು ಈ ಮೊದಲು ಸ್ಪಷ್ಟ ಶಬ್ದಗಳಲ್ಲಿ ಖಂಡಿಸಿದ್ದೇವೆ. ಮಹಾತ್ಮಾ ಗಾಂಧಿಯವರು ಮತ್ತು ಉಳಿದ ಕಾಂಗ್ರೆಸ ಧುರೀಣರು ಅದನ್ನು ಬಿಚ್ಚು ಶಬ್ದಗಳಲ್ಲಿ ನಿಷೇಧಿಸಿದ್ದಾರೆ. ಆದರೆ ಜಿನ್ನಾ ಸಾಹೇಬರು ಮತ್ತು ಮುಸ್ಲಿಂ ಲೀಗಿನ ಇತರ ಧುರೀಣರು ನವಖಾಲಿ ತಿಪ್ಪೇರಾಗಳಲ್ಲಿಯ ಹತ್ಯಾಕಾಂಡವನ್ನು ದುರ್ಲಕ್ಷಿಸಿಯೆ ಬಿಟ್ಟಿರುವರು. ಇತ್ತೀಚಿಗೆ ವೈಸರಾಯರಿಗೆ ಬರೆದ ಸುದೀರ್ಘ ಉತ್ತರದಲ್ಲಿ ಡಾ. ಜಿನ್ನಾ ಸಾಹೇಬರು ತಪ್ಪಿಯಾದರೂ ಪೂರ್ವ ಬಂಗಾಲದಲ್ಲಿಯ ದುರಂತದ ಮಾತನ್ನೆತ್ತಿರುವುದಿಲ್ಲ. ಬಿಹಾರದ ಅನರ್ಥವನ್ನು ಅತಿರಂಜಿತವಾಗಿ ಬರೆದು ಇಂಥ ಅಶಾಂತ ಪರಿಸ್ಥಿತಿಯಲ್ಲಿ ಘಟನಾ ಸಮಿತಿಯನ್ನು ಕೂಡಿಸದೆ ಅನಿಯಮಿತ ಅವಧಿಯವರೆಗೆ ಅದನ್ನು ಮುಂದರಿಸಿರೆಂದು ಕೇಳಿಕೊಂಡಿದ್ದಾರೆ. ಲೀಗ ಧುರೀಣರ ಈ ಮೌನದಿಂದ ಪೂರ್ವ ಬಂಗಾಲದಲ್ಲಿಯ ಮುಸಲ್ಮಾನ ಪುಂಡರ ಮೇಲೆ ಯಾವ ಬಗೆಯ ಪರಿಣಾಮವಾಗಬಹುದೆಂಬುದನ್ನು ಅವರು ವಿಚಾರಿಸಿರುವರೊ? ತಾವು ಮಾಡಿದ್ದನ್ನು ತಮ್ಮ ಮುಖಂಡರು ಖಂಡಿಸುವುದಿಲ್ಲೆಂದ ಬಳಿಕ ಅದಕ್ಕೆಲ್ಲ ಅವರ ಒಪ್ಪಿಗೆಯಿದೆಂದು ಅವರು ಭಾವಿಸಲಿಕ್ಕಿಲ್ಲವೆ? ಹಾಗೆ ಅವರು ಭಾವಿಸಿಕೊಂಡರೆ ಮತ್ತೆ ಅಂಥ ಅನರ್ಥ ಸಂಭವಿಸಲಿಕ್ಕಿಲ್ಲೆಂದು ಯಾರು ಹೊಣೆ ಹೊರುವರು? ಆದುದರಿಂದ ಮುಸ್ಲಿಂ ಲೀಗ ಧುರೀಣರು ಈ ಸಂಕುಚಿತ ಧೋರಣವನ್ನು ಬಿಟ್ಟುಗೊಟ್ಟು ಅನಾಹುತ ಎಲ್ಲಿಯೆ, ಯಾರಿಂದಲೆ ಸಂಭವಿಸಿರಲಿ ಅದನ್ನು ಸ್ಪಷ್ಟ ಶಬ್ದಗಳಲ್ಲಿ ಖಂಡಿಸಬೇಕು. ಅಂದರೆ ತಮಗೆ ಮುಖಂಡರ ಬೆಂಬಲವಿಲ್ಲೆಂದು ಗುಂಡರಿಗೆ ಮನವರಿಕೆಯಾಗಿ ಅವರು ಅದನ್ನು ನಿಲ್ಲಿಸುವರು. ವೈಸರಾಯರಿಗೆ ಶಾಂತಿ ಮಂತ್ರವನ್ನು ಬೋಧಿಸಿದ ಜಿನ್ನಾ ಸಾಹೇಬರು ತಮ್ಮ ಕರ್ತವ್ಯದತ್ತ ಗಮನಿಸುವರೊ?

## ನಿಯಂತ್ರಣದ ಅವಶ್ಯಕತೆ

ಯುದ್ಧಕಾಲದಲ್ಲಿ ಹೇರಲ್ಪಟ್ಟ ನಿಯಂತ್ರಣಗಳನ್ನೆಲ್ಲ ತೆಗೆದು ಹಾಕಬೇಕೋ ಇಲ್ಲವೆ ಕೆಲ ಅವಶ್ಯಕ ಪದಾರ್ಥಗಳ ಮೇಲೆ ನಿಯಂತ್ರಣವನ್ನು ಇನ್ನೂ ಕೆಲ ಕಾಲ ಇಡಬೇಕೊ! ಎಂಬ ಬಗ್ಗೆ ಕೇಂದ್ರ ಶಾಸನ ಸಭೆಯಲ್ಲಿ ಚರ್ಚೆಯಾಗಿ ಆಹಾರಬಟ್ಟೆಗಳನ್ನೊಳಗೊಂಡು ಎಂಟು ವಸ್ತುಗಳ ಮೇಲೆ ನಿಯಂತ್ರಣವಿರಲಿಕ್ಕೆಬೇಕೆಂದು ನಿರ್ಣಯಿಸಲಾಯಿತು. ಪ್ರಜಾಪ್ರಭುತ್ವದ ಸದ್ಯದ ಯುಗದಲ್ಲಿ ನಿಯಂತ್ರಣವೆಂದ ಕೂಡಲೆ ಅನೇಕರು ಮೂಗು ಮುರಿಯುವರು; ಮೂಲಭೂತ ಹಕ್ಕುಗಳ ಮೇಲೆ ಇದೊಂದು ಬಗೆಯ ಗದಾಪ್ರಹಾರವೆಂದು ಟೀಕಿಸುವರು. ಆದರೆ ಪದಾರ್ಥಗಳ ಪೂರಯಿಕೆ ಹೆಚ್ಚಿಗಿಲ್ಲದಾಗ ನಿಯಂತ್ರಣ ಅತ್ಯವಶ್ಯವೆಂಬುದು ಅನುಭವಸಿದ್ಧವಾಗಿದೆ. ನಿಯಂತ್ರಣವನ್ನು ತೆಗೆದ ಕೂಡಲೆ ದರಗಳು ಜನಸಾಮಾನ್ಯರ ಕೊಳ್ಳುವ ಶಕ್ತಿಗೆ ಕೂಡ ನಿಲುಕದಷ್ಟು ಏರುತಿವೆಂಬುದು ಎಲ್ಲರಿಗೂ ಅನುಭವದ ಮಾತಾಗಿದೆ. ಬೆಲ್ಲದ ಒಂದೇ ಉದಾಹರಣೆಯನ್ನು ತೆಗೆದುಕೊಂಡರೂ ನಾವು ಹೇಳಿದ್ದರ ಸತ್ಯವೆ ಕಂಡುಬರುವುದು. ಬೆಲ್ಲದ ಮೇಲಿನ ನಿಯಂತ್ರಣ ತೆಗೆದ ಕೂಡಲೆ ಅದರ ಧಾರಣೆಯಿಂದು ನಾಲ್ಕುಪಟ್ಟು ಏರಿದೆ. ೧೦ ಬಿಲ್ಲಿಗೆ ಪೌಂಡು ಇದ್ದ ಬೆಲ್ಲ ಇಂದು ಹತ್ತಾಣೆ ಕೊಟ್ಟರೂ ಸಿಕ್ಕುವುದಿಲ್ಲ. ವ್ಯಾಪಾರಸ್ಥರಲ್ಲಿಯ ಲಾಭಬಡಕತನವೆ ಇದಕ್ಕೆ ಕಾರಣವೆಂದು ಸ್ಪಷ್ಟವಾಗಿಹೇಳಬಹುದಾಗಿದೆ. ಇದನ್ನು ನೋಡಿದರೆ ನಿಯಂತ್ರಣವಿರುವುದೆ ಒಳಿತೆಂದು ಯಾರಾದರೂ ಅಭಿಪ್ರಾಯಪಡಬಹುದು. ಏಕೆಂದರೆ ಗೊತ್ತುಪಡಿಸಿದ ಧಾರಣೆಗೆ ಬೇಕಾದ ವಸ್ತುವಾದರೂ ಸಿಕ್ಕುವದೆಂದು ನಿಶ್ಚಯಇರುವದು. ಅದರಲ್ಲಿ ಸೀದಾಪದಾರ್ಥಗಳು, ಅವು ಎಂಥವೆ ಇರಲಿ, ಗೊತ್ತುಪಡಿಸಿದ ಬೆಲೆಗೆ ಸಿಕ್ಕೇತೀರುವುವು ಎಂಬುದು ನಿಶ್ಚಿತ. ಸೀದಾ ಪದ್ಧತಿಯನ್ನು ಜಾರಿಯಲ್ಲಿ ತರದೆ ಬರಿ ಧಾರಣೆ ನಿಯಂತ್ರಿಸುವುದರಿಂದ ಪ್ರಯೋಜನವಿಲ್ಲೆಂಬುದೂ ಅನುಭವ. ಆದುದರಿಂದ ಅವಶ್ಯಕ ಪದಾರ್ಥಗಳ ಧಾರಣೆ ನಿಯಂತ್ರಿಸುವುದಲ್ಲದೆ ಅವು ಎಲ್ಲರಿಗೂ ಸಿಕ್ಕುವ ಹೊಣೆಯನ್ನೂ ಸರಕಾರ ಹೊರಬೇಕು. ನಿಯಂತ್ರಣ ಈ ರೀತಿ ಅವಶ್ಯವಾಗಿದ್ದರೂ ಅದರ ಗೂಡ ಲಂಚಗುಳಿತನ ಮನೆಮಾಡದಂತೆ ನೋಡಿಕೊಳ್ಳುವುದೂ ಸರಕಾರದ ಕರ್ತವ್ಯ. ಶಾಸನ ಸಭೆಗಳಲ್ಲಿಯ ಸದಸ್ಯರು ಈ ಮಾತನ್ನು ಸರಕಾರದ ಗಮನಕ್ಕೆ ತಂದುಕೊಟ್ಟಿರುವರು. ಉಪಯುಕ್ತ ಪದಾರ್ಥಗಳೆಲ್ಲ ಸುಲಭ ಬೆಲೆಯಲ್ಲಿ ತೊಂದರೆಯಿಲ್ಲದೆ ಎಲ್ಲರಿಗೂ ಸಿಕ್ಕುವಂತೆ ನೋಡಿಕೊಳ್ಳುವುದು ಸರಕಾರದ ಕರ್ತವ್ಯ. ಸರಕಾರ ಈ ಕರ್ತವ್ಯ ಮಾಡುವಾಗ ವ್ಯಾಪಾರಸ್ಥರು ಮತ್ತು ಇತರರು ಅವರಿಗೆ ಸಹಾಯ ಮಾಡುವದು ಅತ್ಯವಶ್ಯ. ಇಲ್ಲದಿದ್ದರೆ ಸರಕಾರದ ಪ್ರಯತ್ನ ಯಶಸ್ವಿಯಾಗಲಾರದು. ಸರಕಾರೀ ಅಧಿಕಾರಿಗಳಾದರೂ ತಮ್ಮ ಹೊಣೆಗಾರಿಕೆಯನ್ನರಿತು ಕೊಂಡು ಸರಕಾರ ಮತ್ತು ಜನಸೇವೆಯನ್ನು ಮಾಡಬೇಕು.

# ಸಂಪಾದಕೀಯ

# ಟೀಕೆ-ಟಿಪ್ಪಣೆಗಳು

## ಪೊಳ್ಳು ಸಮರ್ಥನೆ

ಆಫ್ರಿಕೆಯ ಸಮಸ್ಯೆಯಿಂದು ಜಗತ್ತಿನಲ್ಲಿಯ ಬಿಕ್ಕಟ್ಟಿನ ಸಮಸ್ಯೆಗಳಲ್ಲೊಂದಾಗಿದೆ. ಅಂತೆಯೆ ಯುಕ್ತರಾಷ್ಟ್ರಸಮಿತಿಯಲ್ಲಿ ಆ ಸಮಸ್ಯೆ ಚರ್ಚೆಗೆ ಬಂದಿದೆ. ದಕ್ಷಿಣ ಆಫ್ರಿಕೆಯಲ್ಲಿ ಹೊಸದಾಗಿ ಪಾಸುಮಾಡಿದ ಘೆಟ್ಟೊ ಕಾಯಿದೆಯಿಂದ ಅಲ್ಲಿನ ಹಿಂದೀಯರ ನಾಗರಿಕ ಮೂಲಭೂತ ಹಕ್ಕುಗಳು ಕಸಿದುಕೊಳ್ಳಲ್ಪಟ್ಟಿವೆ. ಕೆಲ ಸಾವಿರ ಯುರೋಪಿಯನ್‌ರಿಗಾಗಿ ೮೦ ಲಕ್ಷ ಮೂಲನಿವಾಸಿಗಳೂ ವಲಸೆ ಹೋದ ಏಸಿಯಾವಾಸಿಗಳೂ ಸಮಾಜಬಾಹಿರರಾಗಿದ್ದಾರೆ. ಅವರಿಗೆ ನಾಗರಿಕ ಮೂಲಭೂತ ಹಕ್ಕುಗಳಿಲ್ಲ. ಸಾಮಾಜಿಕ ಹಕ್ಕುಬಾಧ್ಯತೆಗಳು ಇಲ್ಲ. ಇಷ್ಟೇ ಅಲ್ಲ; ರಾಜಕೀಯ ಕ್ಷೇತ್ರದಲ್ಲಿಯೂ ಅವರಿಗೆ ಸಾಕಷ್ಟು ಪ್ರಾತಿನಿಧ್ಯವಿಲ್ಲ. ಮೂಲ ನಿವಾಸಿಗಳ ರಕ್ಷಣೆಯ ನೆವದಿಂದ ಏಸಿಯವಾಸಿಗಳ ಪ್ರಾತಿನಿಧ್ಯಕ್ಕೆ ಅರ್ಧಚಂದ್ರ ! ಮೂಲ ನಿವಾಸಿಗಳಿಗಾದರೂ ೨೦೦ ರಲ್ಲಿ ೭ ಸ್ಥಾನ!! ಇದನ್ನು ನೋಡಿದರೆ ಯುರೋಪಿಯನ್ನರ ಸ್ವಾರ್ಥ ಯಾವ ಮಟ್ಟದ್ದಿರುವುದೆಂಬುದು ಗೊತ್ತಾಗುವದು. ಪ್ರಾತಿನಿಧ್ಯ ಪಡೆದ ಏಳು ಜನರೂ ಯುರೋಪಿಯನ್‌ರ ಮತಗಳಿಂದ ಆರಿಸಿ ಬರಬೇಕು. ಅಂದರೆ ಎಂಥ ಹಾದಪ್ಪಗಳ ಆಯ್ಕೆಯಾಗುವುದೆಂಬುದನ್ನು ಬೇರೆ ಹೇಳಬೇಕಿಲ್ಲ. ಹೀಗೆ ಆಫ್ರಿಕೆಯ ಪರಿಸ್ಥಿತಿಯಿರುವಾಗ ಜನರಲ್ ಸ್ಮಟ್ಸರು ಯುಕ್ತರಾಷ್ಟ್ರಸಂಘದ ವಿಶ್ವಸ್ತ ಸಮಿತಿಗೊಪ್ಪಿಸಿದ ವರದಿಯಲ್ಲಿ ಹಿಂದುಸ್ತಾನದಲ್ಲಿಯ ಜಾತೀಯ ಗಲಭೆ, ಹರಿಜನ ಸಮಸ್ಯೆ ಮೊದಲಾದುವನ್ನು ಮುಂದೆ ಮಾಡಿ ತಮ್ಮ ಆಡಳಿತವನ್ನು ಸಮರ್ಥಿಸಿಕೊಳ್ಳುವ ಸಾಹಸ ಮಾಡಿದ್ದಾರೆ. ಹಿಂದುಸ್ತಾನದಲ್ಲಿ ಈ ಎಲ್ಲ ಪ್ರಶ್ನೆಗಳಿದ್ದರೂ ಅವುಗಳನ್ನು ಬಿಡಿಸಲು ಹಿಂದೀಯರು ಪ್ರಯತ್ನಿಸುತಿರುವರು. ಆದರೆ ಜನರಲ್ ಸ್ಮಟ್ಸರು ಆಫ್ರಿಕೆಯಲ್ಲಿ ಇಂಥ ಸಮಸ್ಯೆಗಳನ್ನು ಮತ್ತಷ್ಟು ಹೆಚ್ಚಿಸುತಿರುವರು. ಅವರೀ ಧೋರಣೆಯನ್ನು ಯಾವ ಸಮಂಜಸಮನುಷ್ಯನೂ ಎತ್ತಿಹಿಡಿಯನು. ಸ್ಮಟ್ಸರು ಎರಡನೆಯವರಿಗೆ ಬುದ್ಧಿವಾದ ಹೇಳುತ್ತ ಹೋಗದೆ ತಮ್ಮ ರೀತಿನೀತಿಗಳನ್ನು ತಿದ್ದಿಕೊಳ್ಳುವುದು ಮುತ್ಸದ್ದಿತನದ್ದಾಗಿದೆ.

## ಜವಾಹರರ ಜಯಂತಿ

ಪಂಡಿತ ಜವಾಹರಲಾಲರ ಜನನಿಯ ಜಯಂತಿ ದೇಶವಿದೇಶಗಳಲ್ಲಿ, ಇಂದಿನ ವಿಷಮ ಪರಿಸ್ಥಿತಿಯಲ್ಲಿಯೂ ಆಚರಿಸಲ್ಪಟ್ಟಿತು. ನಮ್ಮ ಕರ್ನಾಟಕದಲ್ಲಿ ನಗರಗಳಲ್ಲಿ ಅಷ್ಟೇ ಅಲ್ಲ; ಚಿಕ್ಕದೊಡ್ಡ ಹಳ್ಳಿಗಳಲ್ಲಿಯೂ ಜವಾಹರಲಾಲರ ಜಯಂತಿ ಆಚರಿಸಲ್ಪಟ್ಟಿತು. ಅವರ ಜಯಂತಿಯನ್ನು ಇಷ್ಟೊಂದು ಉತ್ಸಾಹದಿಂದ ಆಚರಿಸುವದರ ಕಾರಣ ಹುಡುಕಲು ಸಾಹಸಪಡಬೇಕಿಲ್ಲ. ಜವಾಹರರು ಜನತೆಯ ಹೃನ್ಮಂದಿರದಲ್ಲಿ ಚಿರಸ್ಥಾನವನ್ನು ಪಡೆದುದೆ ಇದಕ್ಕೆ ಮುಖ್ಯ ಕಾರಣ. ತಮ್ಮ ಸ್ವಾರ್ಥತ್ಯಾಗ, ಕಾರ್ಯನಿಷ್ಠೆ, ಕಷ್ಟಸಹಿಷ್ಣುತೆ ಮೊದಲಾದ ಅಲೌಕಿಕ ಗುಣಗಳಿಂದ ಜವಾಹರರಿಂದು ಅತ್ಯಂತ ಪೂಜ್ಯರಾಗಿದ್ದಾರೆ. ಅಂತೆಯೆ ಪ್ರಥಮ ರಾಷ್ಟ್ರೀಯ ಸರಕಾರದಲ್ಲಿ ಅವರಿಗೆ ಪ್ರಥಮ ಉಪಾಧ್ಯಕ್ಷಸ್ಥಾನ ದೊರಕಿದೆ. ಭಾರತಕ್ಕೆ ಜಗತ್ತಿನಲ್ಲಿ ಇಂದಿನ ಸ್ಥಾನ ಸಿಕ್ಕಬೇಕಾದರೆ ಜವಾಹರರೇ ಕಾರಣರೆಂಬುದು ಸೂರ್ಯಪ್ರಕಾಶದಷ್ಟು ಸ್ಪಷ್ಟವಿದೆ. ಹಿಂದುಸ್ತಾನವಿಂದು ಸ್ವತಂತ್ರ ವಿದೇಶ ಧೋರಣವನ್ನು ವಹಿಸಲು ಸಮರ್ಥವಾಗುವುದಕ್ಕೂ ಜವಾಹರರ ಧುರೀಣತ್ವವೇ ಕಾರಣ. ಜವಾಹರಲಾಲರು ಇತ್ತೀಚೆ ಕೈಕೊಂಡ ಗುಡ್ಡಗಾಡು ಪ್ರದೇಶ ಸಂಚಾರದಲ್ಲಿ ತೋರಿಸಿದ ಧೈರ್ಯ ಅಪರಿಮಿತವಾಗಿದೆ. ತಮ್ಮ ಮೇಲೆ ಎಂಥ ವಿಪತ್ತು ಬಂದರೂ ಗುಡ್ಡಗಾಡು ಪ್ರದೇಶದ ಜನರ ಕಷ್ಟ-ಸುಖಗಳನ್ನು ತಿಳಿದುಕೊಂಡು ಅವರೊಡನೆ ಹಿಂದುಸ್ತಾನದ ಸ್ನೇಹಸಂಬಂಧ ಬೆಳಿಸಿ ಅವರ ಕಷ್ಟ ನಿವಾರಣೆಗಾಗಿ ಪ್ರಯತ್ನಿಸುವದೆ ಅವರ ಸಂಚಾರದ ಉದ್ದೇಶವಿತ್ತು. ಹಿಂದುಸ್ತಾನದ ಸಂಪೂರ್ಣ ಸ್ವಾತಂತ್ರ್ಯದ ಘೋಷಣೆ ಮಾಡಿದ ಜವಾಹರರು ಹಿಂದುಸ್ತಾನವನ್ನು ಆ ಧ್ಯೇಯದತ್ತ ಸಾಗಿಸಿದ್ದು ಹೆಮ್ಮೆಯ ಮಾತು. ತರುಣರಿಗೆ ಆದರ್ಶರಾದ ಜವಾಹರರು ಚಿರಕಾಲ ಬಾಳಿ ಹಿಂದುಸ್ತಾನದ ಧ್ಯೇಯವನ್ನು ಸಾಧಿಸಲೆಂದು ಹರಸುತ್ತೇವೆ.

## ಪುನರ್ರಚನೆಯ ಯೋಜನೆ

ಮುಂಬಯಿ ಸರಕಾರದವರು ೮೭ ಕೋಟಿ ರೂಪಾಯಿಗಳ ಪುನರ್ರಚನೆಯ ಯೋಜನೆಯನ್ನು ಸಿದ್ಧಪಡಿಸಿದ್ದು ಆ ಶಾಖೆಯ ಮಂತ್ರಿಗಳಾದ ಶ್ರೀ ಎಲ್. ಎಂ. ಪಾಟೀಲರು ಈ ಬಗ್ಗೆ ಪ್ರಾಂತದಲ್ಲೆಲ್ಲ ಸಂಚರಿಸಿ ಜನಾಭಿಪ್ರಾಯವನ್ನು ತಿಳಿದುಕೊಳ್ಳುತಿರುವರು. ಶಿಕ್ಷಣಕ್ಕೆ ೧೬.೮೩ ಕೋಟಿ, ಒಕ್ಕಲತನಕ್ಕೆ ೧೬.೦೩ ಕೋಟಿ, ರಸ್ತೆಗೆ ೧೦.೬೬ ಕೋಟಿ, ಆರೋಗ್ಯ ವರ್ಧನೆಗೆ ೧೦.೪ ಕೋಟಿ, ನೀರಾವರಿಗೆ ೯ ಕೋಟಿ ವಿದ್ಯುತ್ಪಾದನೆಗೆ ೮.೪ ಕೋಟಿ ಕೂಲಿಕಾರರ ವಸತಿ ಮುಂತಾದ ಕ್ಕಾಗಿ ೮ ಕೋಟಿ ರೂಪಾಯಿ ಹೀಗೆ ಬೇರೆ ಬೇರೆ ರಾಷ್ಟ್ರಪೋಷಕ ಕಾರ್ಯಗಳಿಗಾಗಿ ೮೭ ಕೋಟಿ ರೂಪಾಯಿಗಳನ್ನು ವೆಚ್ಚಮಾಡಬೇಕೆಂದು ಸದ್ಯದ ಜನತಾ ಸರಕಾರ ನಿರ್ಧರಿಸಿದೆ. ಹಿಂದಿನ ಸಲಹೆಗಾರ ಸರಕಾರವೂ ಇಂಥದೊಂದು ಯೋಜನೆಯನ್ನಿಟ್ಟುಕೊಂಡಿದ್ದು ವಾಚಕರ ಸ್ಮರಣೆಯಲ್ಲಿರಬಹುದು. ಸದ್ಯದ ಸರಕಾರವು ಅದರಲ್ಲಿ ಮಹತ್ವದ ಬದಲಾವಣೆಯನ್ನು ಮಾಡಿ ಪ್ರಾಂತದ ಜನಸಾಮಾನ್ಯರ ಉದ್ಧಾರದ ಕಡೆಗೆ ಹೆಚ್ಚು ಗಮನವಿತ್ತು ಈ ಯೋಜನೆಯನ್ನು ಸಿದ್ಧಮಾಡಿದೆ. ಹಿಂದಿನ ಸರಕಾರದವರು ನಿವೃತ್ತ ಸೈನಿಕರಿಗಾಗಿಯೆಂದು ಹೆಚ್ಚು ಹಣ ವೆಚ್ಚ ಮಾಡುವವರಿದ್ದರು. ಆ ದೃಷ್ಟಿಯಿಂದಲೆ ಆ ಯೋಜನೆ ಮಾಡಿದ್ದರು. ಆದರೆ ಕಾಂಗ್ರೆಸ ಸರಕಾರ ಅದರ ರೂಪರೇಷೆಗಳನ್ನೆ ಬದಲು ಮಾಡಿರುವದು. ಪ್ರಾಂತದ ಸಾರ್ವಾಂಗಿಕ ಉನ್ನತಿ ಸಾಧಿಸಬೇಕಾದರೆ ಒಂದು ಯೋಜನೆಯನ್ನಿಟ್ಟುಕೊಂಡು ಕಾರ್ಯ ಮಾಡುವದು ಅವಶ್ಯ. ಇಷ್ಟೊಂದು ಹಣವೆಲ್ಲಿಂದ ತರುವರೆಂದು ಅನೇಕರು ಆಶ್ಚರ್ಯ ವ್ಯಕ್ತಪಡಿಸಬಹುದು. ಆದರೆ ಸರಕಾರದ ಯೋಜನೆಯಲ್ಲಿ ಈ ಹಣದ ಏರ್ಪಾಡೂ ಮಾಡಿದ್ದು ಕಂಡು ಬರುವದು. ಕೇಂದ್ರ ಸರಕಾರದಿಂದ ೧೭॥ ಕೋಟಿ ಸಹಾಯ, ಪುನರ್ರಚನೆಗಾಗಿ ಮೀಸಲಿಟ್ಟ ೧೨॥ ಕೋಟಿ ನಿರ್ದಿಷ್ಟ ಕೆಲಸಕ್ಕೆಂದು ತೆಗೆದಿಡದ ೧೦ ಕೋಟಿ ಮುಂದಿನ ಐದು ವರ್ಷಗಳಲ್ಲಿಯ ಉಳಿತಾಯ ೧೦ ಕೋಟಿ ಇನ್ನುಳಿದ ೨೭ ಕೋಟಿ ರೂಪಾಯಿಗಳನ್ನು ಸಾಲ ತೆಗೆದು ಈ ವೆಚ್ಚವನ್ನು ಬಾಯಿಗೂಡಿಸಬೇಕೆಂದು ಸರಕಾರದವರು ಯೋಜಿಸಿದ್ದಾರೆ. ಸರಕಾರದ ಈ ಯೋಜನೆ ಯಶಸ್ವಿಯಾಗಬೇಕಾದರೆ ಅಧಿಕಾರಿಗಳೂ ಜನತೆಯೂ ಹಾರ್ದಿಕ ಸಹಾಯವನ್ನೀಯಬೇಕು. ಈ ಸಹಕಾರ ಸಿಕ್ಕದಿದ್ದರೆ ಎಷ್ಟೋ ಸಲ ಹಣ ನಿರರ್ಥಕ ಹಾಳಾಗುವ ಸಂಭವವುಂಟು. ಹಾಗಾಗದಂತೆ ನೋಡಿಕೊಳ್ಳುವದು ಪ್ರತಿಯೊಬ್ಬರ ಕರ್ತವ್ಯ. ಆಯಾ ಭಾಗದ ಜನರು ತಮ್ಮಲ್ಲಿ ಯಾವ ಯಾವ ಯೋಜನೆಗಳನ್ನು ಕೈಕೊಳ್ಳುವುದವಶ್ಯವೆಂಬುದನ್ನು ಸರಕಾರಕ್ಕೆ ತಿಳಿಸಿ ಅವನ್ನು ದುಂದಾಲ ಬಿದ್ದು ಕಾರ್ಯಕಾರೀ ಮಾಡಿಸಿಕೊಳ್ಳಬೇಕು. ಈ ಸಮಯದಲ್ಲಿ ಹಿಂದೆ ಬಿದ್ದರೆ ಕೊನೆಯ ವರೆಗೆ ಹಿಂದೆಯೇ ಉಳಿಯಬೇಕಾಗುವದು. ವಿಶೇಷವಾಗಿ ನಮ್ಮ ಕರ್ನಾಟಕದ ಜನರು ನಿಶ್ಚಿತ ಯೋಜನೆಗಳನ್ನು ಗೊತ್ತುಪಡಿಸಿಕೊಂಡು ಇಡೀ ಪ್ರಾಂತದ ಸಾರ್ವಾಂಗಿಕ ಅಭಿವೃದ್ಧಿಯಾಗುವಂತೆ ಸರಕಾರಕ್ಕೆ ಸಲಹೆ ಕೊಟ್ಟು ಅವರ ಯೋಜನೆಯ ಲಾಭ ಪಡೆಯಬೇಕಾಗಿ ಕೋರಿಕೆ.

# ಡಿಸೆಂಬರ ೯ಕ್ಕೆ ಘಟನಾ ಸಮಿತಿ ಪ್ರಾರಂಭ

## ಮುಸ್ಲಿಂ ಲೀಗಿನವರ ಬಹಿಸ್ಕಾರ!

### ಹಿಂದುಸ್ತಾನ ಪಾಕಿಸ್ತಾನಗಳಲ್ಲಿ ಪ್ರಜಾವಿನಿಮಯ ಬೇಕಂತೆ!

ಕಳೆದ ಮೂರು ತಿಂಗಳುಗಳಿಂದ ಹಿಂದುಸ್ತಾನದಲ್ಲೆಲ್ಲ ಜ್ವಲಿಸುತ್ತಿದ್ದ ಭಯಂಕರ ಜಾತೀಯ ಹತ್ಯಾಕಾಂಡ ಸಮಾಧಾನ ಹೊಂದುತ್ತಿರುವ ಸಂಗತಿ ಎಲ್ಲ ಶಾಂತಿ ಪ್ರಿಯರನ್ನೂ ಸಂತೋಷಗೊಳಿಸದಿರದು. ಅಲ್ಲೊಂದು ಇಲ್ಲೊಂದು ಚಿಲ್ಲರೆ ಅತ್ಯಾಚಾರವನ್ನು ಬದಿಗಿಟ್ಟರೆ ಈ ವಾರದಲ್ಲಿ ಹಿಂದುಸ್ತಾನದಲ್ಲೆಲ್ಲ ವಿವೇಕದ ಉದಯವಾಗಿದೆಯೆನ್ನಬಹುದು. ಗಾಂಧೀಜಿಯ ಬಂಗಾಲ ಪ್ರವಾಸ ಮತ್ತು ಸಂತ್ರಸ್ತ ಹಳ್ಳಿಗಳ ದರ್ಶನ ಯಥಾಪ್ರಕಾರ ಸಾಗಿದೆ ಅವರ ಅಲ್ಪಾಹಾರ ನಿಯಮವೂ ಹಾಗೆಯೆ ನಡೆದಿದೆ. ಇದರಿಂದ ಅವರ ಆರೋಗ್ಯಕ್ಕೆ ಈಗಾಗಲೆ ಧಕ್ಕೆಯೊಗತೊಡಗಿದೆಯೆಂದು ಅವರ ಶಿಷ್ಯೆಯಾದ ಡಾ. ಸುಶೀಲಾ ನಯ್ಯರು ಪ್ರಕಟಿಸಿದ್ದಾರೆ. ಬಿಹಾರದಲ್ಲಿ ಈಗ ಶಾಂತತೆ ನೆಲಸಿರುವದರಿಂದ ಗಾಂಧೀಜಿ ಇನ್ನು ಈ ವ್ರತವನ್ನು ಉಪಸಂಹರಿಸಬೇಕೆಂದು ಬಾಬು ರಾಜೇಂದ್ರ ಪ್ರಸಾದರು ಅವರಿಗೆ ಬಿನ್ನವಿಸಿಕೊಂಡಿದ್ದಾರೆ.

ಜಾತೀಯ ಪಿಶಾಚಿಯಿಂದ ಪೀಡಿತರಾದ ನಿರ್ಗತಿಕರ ವ್ಯವಸ್ಥೆ ಯೀಗ ಬಂಗಾಲ ಬಿಹಾರಗಳಲ್ಲಿ ಹಲವಾರು ಸಮಸ್ಯೆಗಳನ್ನು ತಂದೊಡ್ಡಿದೆ. ಬಿಹಾರದಲ್ಲಿ ನಿರಾಶ್ರಿತರಾದ ಮುಸ್ಲಿಮರನ್ನು ಪುನಃ ತಮ್ಮ ಹಳ್ಳಿಗಳಿಗೆ ಕಳಿಸಿಕೊಡುವ ಪರಿಸ್ಥಿತಿಯುಂಟಾಗಿರುವದರಿಂದ ಉದ್ವಿಗ್ನ ಪ್ರದೇಶಗಳಿಂದ ಮುಸ್ಲಿಮರನ್ನು ಸ್ಥಳಾಂತರಿಸುವ ಗೋಸುಗ ಕೊಟ್ಟಿದ್ದ ಸವಲತ್ತುಗಳನ್ನು ಬಿಹಾರ ಸರಕಾರ ಹಿಂತೆಗೆದುಕೊಂಡಿದೆ. ಸಂತ್ರಸ್ತರನ್ನು ಪರಿಹಾರ ಶಿಬಿರಗಳಲ್ಲಿ ಯೋಗ್ಯ ರೀತಿಯಿಂದ ನೋಡಿಕೊಳ್ಳಲಾಗುತಿದೆ. ಮಹಾತ್ಮರ ಬ್ರಹ್ಮಾಸ್ತ್ರಕ್ಕೆ ಕಟ್ಟು ಬಿದ್ದ ಬಿಹಾರಿ ಹಿಂದುಗಳು ತಮ್ಮ ಮೌಢ್ಯವನ್ನು ತಿಳಿದುಕೊಂಡು ಮುಸ್ಲಿಂ ಬಂಧುಗಳನ್ನು ಪುನಃ ಸ್ವಾಗತಿಸಲು ಸಿದ್ಧರಾಗುವರೆಂದು ಧೈರ್ಯದಿಂದ ನಂಬಬಹುದು. ಇನ್ನು ಕೆಲವೇ ದಿನಗಳಲ್ಲಿ ಪುನರ್ವಸತಿಯ ಕಾರ್ಯ ರಭಸದಿಂದ ಪ್ರಾರಂಭವಾಗಬಹುದು.

ಆದರೆ ಬಂಗಾಲದಲ್ಲೊ? ಗಾಂಧೀಜಿಯವರು ಕಂಡು ಕೇಳಿದ ಸಂಗತಿಗಳಿಂದ ಅಲ್ಲಿಯ ಪುನರ್ವಸತಿಯ ಪ್ರಶ್ನೆ ಅಷ್ಟು ಸರಲವಾಗಿದೆಯೆಂದೆನಿಸುವದಿಲ್ಲ. ಹಿಂದುಗಳು ತಿರುಗಿ ಹಳ್ಳಿಗಳಿಗೆ ಮರಳಬೇಕೋ ಬೇಡವೋ ಎಂಬುದನ್ನು ಖಂಡಿತವಾಗಿ ಹೇಳಿಬಿಡಿರೆಂದು ಮಹಾತ್ಮಾ ಗಾಂಧಿಯವರು ರಾಮಗಂಜದ ಒಂದು ಪ್ರಾರ್ಥನಾ ಸಭೆಯಲ್ಲಿ ಮುಸ್ಲಿಮರನ್ನು ನೇರವಾಗಿ ಕೇಳಿದರು. ಕೆಲ ದಿನಗಳಿಂದ ಮುಸ್ಲಿಮರು ತಮ್ಮ ಸಭೆಗಳಿಂದ ತಪ್ಪಿಸಿಕೊಳ್ಳುತ್ತಿರುವದು ಅವರ ಲಕ್ಷ್ಯಕ್ಕೆ ಬಂದಿತ್ತು. ಹಿಂದುಗಳೊಡನೆ ಸ್ನೇಹದಿಂದ ಇರಬೇಕಾದರೂ ಗಾಂಧೀಜಿಯ ಸಭೆಗೆ ಹೋಗಬೇಕಾದರೂ ತಮಗೆ ಲೀಗಿನ ಅಪ್ಪಣೆ ಬೇಕೆಂದು ಅವರು ಅನ್ನುತ್ತಿರುವರೆಂದು ಗಾಂಧೀಜಿಗೆ ವಿಶ್ವಸನೀಯವಾಗಿ ತಿಳಿದುಬಂದಿತ್ತು. ಮುಸ್ಲಿಂ ಪ್ರಮುಖರು ಹಿಂದುಗಳಿಗೆ ಸುರಕ್ಷಿತತೆಯ ಆಶ್ವಾಸನವಿತ್ತರೆ ಮಾತ್ರವೇ ಹಿಂದುಗಳು ಮರಳಿ ಬರಬಲ್ಲರೆಂದು ಗಾಂಧೀಜಿ ಖಂಡಿತವಾಗಿ ಹೇಳಿದರು. ಹಿಂದೂಗಳ ಮನೆಮಾರು ಹಾಳು ಬಿದ್ದಿರುವದರಿಂದ ಮುಸ್ಲಿಂರು ಅವರಿಗೆ ಎಲ್ಲ ಸೌಕರ್ಯಗಳನ್ನು ಒದಗಿಸಬೇಕೆಂದೂ ಅವರು ತಿಳಿಸಿದರು.

#### ಲೀಗಿನ ಉಪದ್ವ್ಯಾಪ?

ಬಂಗಾಲ ಸರಕಾರ ಮೆಲ್ಲ ಮೆಲ್ಲನೆ ಚಲಿಸತೊಡಗಿದೆ. ಮುಖ್ಯ ಮಂತ್ರಿ ಸುಹ್ರವರ್ದಿಯವರು ಗಾಂಧೀಜಿಯನ್ನು ಭೆಟ್ಟಿಯಾಗಿ ಎರಡು ತಾಸು ಮಾತಾಡಿ ಹಿಂದೂಗಳ ನೆಮ್ಮದಿಯನ್ನು ಚರ್ಚಿಸಿದರು. ಅವರು ಈಗ ಸಂತ್ರಸ್ತ ಜಿಲ್ಲೆಗಳ ಪ್ರವಾಸವನ್ನು ಕೈಕೊಂಡಿದ್ದಾರೆ. ಹಿಂದುಗಳನ್ನು ಮರಳಿ ಕರೆಸಿಕೊಂಡು ಅವರಿಗೆ ಸುರಕ್ಷಿತತೆಯ ಆಶ್ವಾಸನಕೊಡುವದಲ್ಲದೆ ಅವರ ವಸತಿಗೆ ಅನುಕೂಲ ಮಾಡಿಕೊಡಬೇಕು, ಅವರ ಅಪಹೃತ ಸ್ತ್ರೀಯರನ್ನು ಬಿಟ್ಟುಕೊಡಬೇಕು, ಎಂದು ಉಪದೇಶ ಮಾಡಲೂ ಪ್ರಾರಂಭಿಸಿದ್ದಾರೆ. ಇವು ಯಶಸ್ವಿಯಾಗಿ ನಡೆದು ಹಿಂದುಗಳಿಗೆ ನೆಮ್ಮದಿಯಿಂದಿರಲು ಸಾಧ್ಯವಾಗುವದೆಂದು ಹಾರೈಸೋಣ.

ಆದರೆ ಆ ಹಾರೈಕೆ ಬಯಲಾಗಬಹುದೆಂಬ ಭೀತಿಯುಂಟಾಗತೊಡಗಿದೆ. ಜಿನ್ನಾ ಸಾಹೇಬರಾಗಲಿ ಅವರ ಸಂಗಡಿಗರಾಗಲಿ ಹೊಸತೇನನ್ನೂ ಕಲಿಯಲಿಕ್ಕಿಲ್ಲ ಹಳೆಯದನ್ನು ಮರೆಯಲಿಕ್ಕಿಲ್ಲ ಎಂದು ಹಟತೊಟ್ಟಂತಿದೆ. ದೇಶದ ಯಜ್ಞಕುಂಡ ಆರುತಿರುವಾಗಲೆ ಅವರು ಪುನಃ ಅದಕ್ಕೆ ಎಣ್ಣೆ ಸುರಿಯುವ ಕಾಯಕವನ್ನು ಆರಂಭಿಸಿದ್ದಾರೆ. ಜಿನ್ನಾ ಸಾಹೇಬರು ಪುನಃ ಪಾಕಿಸ್ತಾನದ ಭೂತವನ್ನು ಎಬ್ಬಿಸಿ ನಿಲ್ಲಿಸಿರುವರು. "ನಡುಗಾಲ ಸರಕಾರ ಭಾವೀ ರಾಜ್ಯ ಘಟನೆಯಲ್ಲಿ ಕೈಹಾಕಬಾರದು. ಪಾಕಿಸ್ತಾನದ ಬೇಡಿಕೆಗೆ ಅಡ್ಡ ಬರುವ ಅದರ ಯಾವುದೇ ಕಾರ್ಯವನ್ನು ನಾವು ಸಹಿಸಲಾರೆವು" ಎಂದು ವಿದೇಶ ಸುದ್ದಿಗಾರರಿಗೆ ಅವರೊಂದು ಹೇಳಿಕೆ ಕೊಟ್ಟಿದ್ದಾರೆ. ಬಂಗಾಲದಲ್ಲಿ, ಎಲ್ಲಕ್ಕೂ ಮೊದಲಾಗಿ ಪ್ರಾರಂಭವಾದ ಅತ್ಯಾಚಾರದ ಸುದ್ದಿಯೆತ್ತದೆ ಬಿಹಾರದಲ್ಲಾದ ಘಟನೆಗಳನ್ನಷ್ಟೆ ಅವರು ಹಿರಿದು ಮಾಡಿ ಹೇಳುತ್ತಿದ್ದಾರೆ. ಬಿಹಾರದ ಘಟನೆಗಳಿಂದ ಪಾಕಿಸ್ತಾನ ಹೇಗೆ ಅನಿವಾರ್ಯವೆಂದು ಸಿದ್ಧವಾಗುತ್ತದಂತೆ. ಇದರಿಂದ ಅವರು ಇನ್ನೊಂದು ಹೊಸ ನಿರ್ಣಯಕ್ಕೆ ಜಿಗಿದಿದ್ದಾರೆ. ಪಾಕಿಸ್ತಾನ ಹಿಂದುಸ್ತಾನಗಳ ನಡುವೆ ಪ್ರಜೆಗಳ ಸ್ಥಳಾಂತರದ ಪ್ರಶ್ನೆಯನ್ನು ಕೂಡ ಘಟನಾ ಸಮಿತಿ ವಿಚಾರಿಸಬೇಕಾಗುವದೆಂದು ಅವರ ಹೇಳಿಕೆ. ಈ ವರೆಗೆ ಇಂಥ ಸ್ಥಳಾಂತರ ಅಸಾಧ್ಯವೆಂದು ಅವರೇ ಹೇಳುತ್ತ ಬಂದಿದ್ದರು. ಬಂಗಾಲದ ಮುಖ್ಯ ಮಂತ್ರಿಗಳು ಈ ಕಾರ್ಯಕ್ರಮವನ್ನು ಈಗಾಗಲೆ ಆರಂಭಿಸಿಬಿಟ್ಟಂತೆ ತೋರುತ್ತದೆ. ಬಿಹಾರಕ್ಕೆ ಅವರೊಬ್ಬ ಅಧಿಕಾರಿಯನ್ನು ಕಳಿಸಿ ಸಂತ್ರಸ್ತ ಭಾಗದ ಮುಸ್ಲಿಮರನ್ನು ಬಂಗಾಲದಲ್ಲಿ ಬಂದು ನೆಲಸುವಂತೆ ಮನವೊಲಿಸತೊಡಗಿದ್ದಾರೆ. ಈಗಾಗಲೆ ೨೫೦ ಜನರನ್ನು ಹೀಗೆ ಕರೆದುಕೊಂಡು ಹೋಗಲಾಗಿದೆ. ಅದರಿಂದ ಬಂಗಾಲ ಸರಕಾರದ ಆ ಮುಸ್ಲಿಂ ಅಧಿಕಾರಿಯನ್ನು ಬಿಹಾರ ಬಿಟ್ಟು ಹೊರಹೋಗಲು ಬಿಹಾರ ಸರಕಾರ ಕೇಳಬೇಕಾಗಿಬಂತು. ಇಂಥ ವೃತ್ತಿಯಿಂದ ಬಂಗಾಲದಲ್ಲಿ ಮುಸ್ಲಿಂ ಸಂಖ್ಯೆಯನ್ನು ಹೆಚ್ಚಿಸಬೇಕೆನ್ನುವ ಸುಹ್ರವರ್ದಿಯವರಿಂದ ಪೂರ್ವ ಬಂಗಾಲದ ಹಿಂದುಗಳ ನೆಮ್ಮದಿಯನ್ನು ಹೇಗೆ ನಿರೀಕ್ಷಿಸಬೇಕು? ಬಿಹಾರದ ಗಲಭೆಗಳಿಗೆ ಹೇಗೆ ಬಂಗಾಲ ಸರಕಾರವೇ ಕಾರಣವಾಗಿತ್ತೆಂದೂ ತಿಪ್ಪೇರಾ ನೌಖಾಲಿಗಳ ಅತ್ಯಾಚಾರಗಳಿಗೆ ಸುಹ್ರವರ್ದಿಯವರ ಪ್ರತ್ಯಕ್ಷಾಪ್ರತ್ಯಕ್ಷ ಪ್ರಚೋದನೆಯಿತ್ತೆಂದೂ ಬಂಗಾಲ ಮುಸ್ಲಿಮ ಲೀಗಿನ ಇದೀಗ ರಾಜೀನಾಮೆ ಕೊಟ್ಟಿರುವ ಅಧ್ಯಕ್ಷರಾದ ಮೌ. ಅಕ್ರಾಮುಖಾನರು ಹೇಳಿದ್ದಾರೆ. ತಮಗೆ ಹಿತವಲ್ಲದ ನಡುಗಾಲ ಸರಕಾರವಿದ್ದುದರಿಂದಲೇ ಈ ಗಲಭೆಗಳಾದವೆಂದೂ ಇನ್ನೂ ಅವು ಸಾಗತಕ್ಕವುಗಳೇ ಎಂದೂ ಜಿನ್ನಾ ಸಾಹೇಬರು ತಿಳಿಸಿ ಬಿಟ್ಟಿರುವದರಿಂದ ಅವರ ಅಂತರ್ಯ ಈ ಹಿಂಸೆಯಿಂದ ಕರಗಿಲ್ಲವೆಂದಲ್ಲದೆ ಬೇರೇನು ಹೇಳಬಹುದು? ಬಿಹಾರದಲ್ಲಿ ನಡೆದ ಗಲಭೆಗಳು ಬಂಗಾಲಕ್ಕಿಂತ ಎಷ್ಟೋ ಭಯಾನಕವಾಗಿದ್ದವೆಂದು ಕೌನ್ಸಿಲ ಆಫ ಸ್ಟೇಟದಲ್ಲಿ ನಡುಗಾಲ ಸರಕಾರದ ಮಂತ್ರಿಗಳಾದ ನಿಶ್ತಾರರಂಥವರು ಹೇಳಿ ಸಹಮಂತ್ರಿ ರಾಜೇಂದ್ರಪ್ರಸಾದರಿಂದ ಪ್ರತಿಭಟನೆ ಕೊಡಿಸಿದರು. ಸರಕಾರದಲ್ಲಿಯೂ ಲೀಗಿನವರು ಕಾಂಗ್ರೆಸಿನೊಡನೆ ಹೋರಾಡುವರೆಂದು ತೋರಿಸಲು ಇನ್ನೇನು ಬೇಕು?

#### ಘಟನಾ ಸಮಿತಿ ಪ್ರಾರಂಭ

ಎಂಥ ದುರಂತವನ್ನು ಜಿನ್ನಾ ಸಾಹೇಬರು ರಾಜಕೀಯ ಆಯುಧವಾಗಿ ಉಪಯೋಗಿಸಲು ಹಿಂಜರಿಯುವದಿಲ್ಲವೆಂದು ಮೇಲಿನ ಸಂಗತಿಗಳಿಂದ ಸ್ಪಷ್ಟವಾಗುತ್ತದೆ. ಘಟನಾ ಸಮಿತಿಯ ಸಭೆಯ ವಿಷಯದಲ್ಲಿ ಜಿನ್ನಾ ಸಾಹೇಬರ ಧೋರಣೆಯಾದರೂ ಇದೇ ಮಾತನ್ನು ಹೊರಗೆಡಹಿತು. ಡಿಸೆಂಬರ ೯ಕ್ಕೆ ಘಟನಾ ಸಮಿತಿ ದಿಲ್ಲಿಯಲ್ಲಿ ಸೇರುವದೆಂದು ಸರಕಾರಿ ಪ್ರಕಟನೆ ಹೊರಟಿದೆ. ಆದರೆ ಇದಕ್ಕೆ ಅಡ್ಡಗಾಲಿಕ್ಕಲು ಜಿನ್ನಾರು ಶತಪ್ರಯತ್ನ ಮಾಡದಿರಲಿಲ್ಲ. ಬಿಹಾರದಲ್ಲಿ ಮತ್ತು ದೇಶದಲ್ಲಿ ನಡೆದ ದುರ್ಘಟನೆಗಳ ಮೂಲಕ ಘಟನಾ ಸಮಿತಿಯ ಸಭೆಯನ್ನು ಅನಿಯಮಿತವಾಗಿ ಮುಂದೂಡಬೇಕೆಂದು ಅವರು ವಾಯಿಸರಾಯರನ್ನು ಒತ್ತಾಯಗೊಳಿಸಿದರು. ಅದಲ್ಲದೆ ತಪ್ಪನ್ನು ಕಾಂಗ್ರೆಸಿನ ಮೇಲೆ ಹೊರಿಸುವ ಪ್ರಯತ್ನವನ್ನೂ ಅವರು ಮಾಡಿದ್ದಾರೆ. ಕಾಂಗ್ರೆಸ್ಸು ಮೇ ೧೬ ರ ಘೋಷಣೆಯನ್ನು ಸ್ವೀಕರಿಸಿಯೇ ಇಲ್ಲ. ಅದು ಗುಂಪುಗಳ ರಚನೆಯ ತತ್ವವನ್ನೂ ಒಪ್ಪಿಲ್ಲ. ಆಸಾಮದ ಮುಖ್ಯ ಮಂತ್ರಿಗಳಾದರೂ ಗುಂಪಿನ ತತ್ವವನ್ನು ವಿರೋಧಿಸಬೇಕೆಂದು ತಮ್ಮ ಸದಸ್ಯರಿಗೆ ಅಪ್ಪಣೆ ಕೊಟ್ಟಿದ್ದಾರೆ, ಘೋಷಣೆಯಲ್ಲಿನ "ಗುಂಪಿನ" ವಿಷಯದ ವ್ಯಾಖ್ಯೆಗು ನಿರ್ಣಯ ನ್ಯಾಯಸ್ಥಾನದಲ್ಲಾಗಬೇಕೆಂದು ಕಾಂಗ್ರೆಸ್ಸು ಹೇಳುತ್ತದೆ. ನ್ಯಾಯಸ್ಥಾನದ ಮಾತು ಘೋಷಣೆಯಲ್ಲಿ ಬಂದಿಲ್ಲ. ಘೋಷಣೆಗೆ ಕಾಂಗ್ರೆಸ್ಸು ಮತ್ತು ಲೀಗು ಬೇರೆ ಬೇರೆ ಅರ್ಥಗಳನ್ನ ಕಲ್ಪಿಸಿವೆ. ಹೀಗಿರುವದರಿಂದ ಕಾಂಗ್ರೆಸ್ಸು ಬ್ರಿಟಿಶ ಘೋಷಣೆಯ ತತ್ವವನ್ನು ಮೊದಲು ಒಪ್ಪಿಕೊಳ್ಳುವಂತೆ ಮಾಡಬೇಕೆಂದು ಅವರು ವಾಯಿಸರಾಯರಿಗೆ ಕೇಳಿಕೊಂಡರು. ಗಲಭೆಯ ಕಾರಣದಿಂದ ಅವರಿಗೆ ಲೀಗ್ ಕೌನ್ಸಿಲ ಸಭೆಯನ್ನು ಕರೆಯುವದಾಗಲಿಲ್ಲಂತೆ. ಅದರಲ್ಲಿ ಇನ್ನೂ ಬ್ರಿಟಿಶ ಘೋಷಣೆಯನ್ನು ಸ್ವೀಕರಿಸುವ ಗೊತ್ತುವಳಿಯಾಗಿಲ್ಲ. ಅದರಿಂದ ಘಟನಾ ಸಮಿತಿಯನ್ನು ಮುಂದೂಡಬೇಕು. ಇದು ಅವರ ಹಟವಾಗಿತ್ತು. ವಾಯಿಸರಾಯರು ಅವರ ಮಾತನ್ನು ಒಪ್ಪಿ ಘಟನಾ ಸಮಿತಿಯ ಸಭೆಯನ್ನು ಮುಂದೆ ಹಾಕಲು ಸಿದ್ಧರಿದ್ದರೆಂದೂ ಆದರೆ ಹಾಗೆ ಮಾಡಿದ್ದಾದರೆ ಕಾಂಗ್ರೆಸ್ಸು ನಡುಗಾಲ ಸರಕಾರವನ್ನು ಬಿಟ್ಟು ಹೊರಬೀಳುವ ಬೆದರಿಕೆ ಹಾಕಿದ್ದರಿಂದ ವಾಯಿಸರಾಯರು ಪುನಃ ಜಿನ್ನಾ ಸಾಹೇಬರನ್ನು ನೋಯಿಸುವ ಧೈರ್ಯ ಮಾಡಿದರೆಂದೂ ಹೇಳಲಾಗಿದೆ. ಬ್ಯಾ. ಜಿನ್ನಾ ಸಾಹೇಬರು ಸರಕಾರದ ಈ ಪ್ರಕಟನೆಗೆ ಉತ್ತರವೆಂಬ ಒಂದು ಪ್ರಕಟನೆಯನ್ನು ಹೊರಡಿಸಿದ್ದಾರೆ. ಅದರಲ್ಲಿ ಅವರು ಮುಸ್ಲಿಂ ಲೀಗಿನವರು ಘಟನಾ ಸಮಿತಿಯ ಸಭೆಯನ್ನು ಬಹಿಷ್ಕರಿಸುವರೆಂದೂ ಸರಕಾರದವರು ವಹಿಸಿದ ಈ ಧೋರಣದಿಂದ ಪರಿಸ್ಥಿತಿ ಮತ್ತಷ್ಟು ವಿಷಮವಾಗುವದೆಂದೂ ಅಪ್ರತ್ಯಕ್ಷ ಬೆದರಿಕೆಯನ್ನು ಹಾಕಿದ್ದಾರೆ. ಜಿನ್ನಾರವರ ಈ ಧೋರಣದಿಂದ ದೇಶದಲ್ಲಿ ನೆಮ್ಮದಿಯುಳಿಯಲಾರದೆಂಬ ಭೀತಿ ಈಗಲೆ ಎನಿಸಹತ್ತಿದೆ.

#### ಶಾಸ್ತ್ರಿಗಳ ಸ್ಪಷ್ಟೋಕ್ತಿ

ಇಷ್ಟೆಲ್ಲ ಅಶಾಂತಿಗೆ ಕಾರಣವಾದ ಪಾಕಿಸ್ತಾನ ಬೇಡಿಕೆಯ ಭೂತವನ್ನು ಪುನರಪಿ ಎಚ್ಚರಿಸಿದ ಜಿನ್ನಾರ ಹೇಳಿಕೆಗಳಿಗೆ ರಾಷ್ಟ್ರೀಯ ಲಿಬರಲ್ ಫೆಡರೇಶನದ ಅಧ್ಯಕ್ಷರಾದ ವೆಂಕಟರಾಮ ಶಾಸ್ತ್ರಿಗಳು ಬಹಳ ಸಮಂಜಸವಾದ ಉತ್ತರ ಕೆ[illegible]ದ್ದಾರೆ. ಬಿಹಾರದ ಗಲಭೆಗಳಿಂದ ಪಾಕಿಸ್ತಾನ ಅವಶ್ಯಕತೆ ಸಿದ್ಧವಾದಂತಾಗಿದೆಯೆಂಬ [illegible]ವಾದವನ್ನು ಖಂಡಿಸಿ ಅದರಿಂದ ತದ್ವಿರುದ್ಧವಾದ ಸಿದ್ಧಾಂತ ಹೊರಡುತ್ತದೆಯೆಂದು ಅವರು ತೋರಿಸಿಕೊಟ್ಟಿದ್ದಾರೆ. ಬಂಗಾಲ ಬಿಹಾರಗಳಲ್ಲಿಯೂ ಗಲಭೆಗಳಿಂದ ಕೇಂದ್ರ ಸರಕಾರಕ್ಕೆ ಇನ್ನೂ ಅಧಿಕಾರವಿರಬೇಕೆಂದೂ ಸಂಕಟಕಾಲದಲ್ಲಿ ಅದಕ್ಕೆ ಪ್ರಾಂತಗಳ ಆಡಳಿತೆಯಲ್ಲಿ ಕೈಯಿಕ್ಕುವ ಅಧಿಕಾರವಿರಬೇಕೆಂದೂ ಸ್ಪಷ್ಟವಾಗಿದೆ. ಬಂಗಾಲವಲ್ಲಾದ ಅತ್ಯಾಚಾರಗಳನ್ನು ಜಿನ್ನಾ ಸಾಹೇಬರು ಎತ್ತಿಯೂ ಇಲ್ಲ. ಅದನ್ನು ಖಂಡಿಸುವದಗಲ್ಲಿ ಆಸಕ್ತಿ ತೋರಿಸಲಿಲ್ಲ. ಇದರಿಂದ ಅವರಿಗೆ ಅದೆಲ್ಲ ಸಮ್ಮತವೆಂದು ಅರ್ಥ ಹೊರಡಿಸಬಹುದಾಗಿದೆ ಎಂದು ಹೇಳಿ ಶಾಸ್ತ್ರಿಗಳು ಬಂಗಾಲ ಬಿಹಾರಗಳಲ್ಲಿನ ಅಂತರವನ್ನು ಎತ್ತಿ ತೋರಿಸುತ್ತ ನುಡಿದರು: ಬಂಗಾಲದಲ್ಲಾದ ಅತ್ಯಾಚಾರಗಳು ಲೀಗದ ಪ್ರತ್ಯಕ್ಷ ಹೋ[illegible]ದ ಪರಿಣಾಮವಾಗಿ ಕಲಕತ್ತೆಯಲ್ಲಿ ಪ್ರಾರಂಭವಾದವು. ನೌಖಾಲಿ ತಿಪ್ಪೇರಾಗಳು ಅದೇ ದಾರಿ ಹಿಡಿದವು. ಆದರೆ ಲೀಗ ಧುರೀಣರು ಅವುಗಳನ್ನು ಖಂಡಿಸಲಿಲ್ಲ. ಆದರೆ ಬಿಹಾರದಲ್ಲಿ ಲೀಗಿನದಾರಿ ಹಿಡಿದು ಹಿಂದೂಗಳು ಅತ್ಯಾಚಾರ ಪ್ರಾರಂಭಿಸಿದಾಗ ಕಾಂಗ್ರೆಸ್ಸು ಒಡನೆ ಕಾರ್ಯಪ್ರವೃತ್ತವಾಯಿತು. ಜವಾಹರಲಾಲರು, ಗಾಂಧಿಜಿ, ರಾಜೇಂದ್ರಪ್ರಸಾದರು ಧಾವಿಸಿಬಂದರು. ಅತ್ಯಾಚಾರವನ್ನು ಖಂಡಿಸಿದರು. ಅಲ್ಲಿ ಶಾಂತತೆಯನ್ನು ಬಹಳ ಬೇಗ ಪುನಃ ಪ್ರಸ್ಥಾಪಿಸಲಾಯಿತು. ಇದರಿಂದ ಏನು ತಿಳಿಯುತ್ತದೆ? ಬಂಗಾಲದಲ್ಲಿ ಲೀಗಿನ ಕೈಲಿ ಪಾಕಿಸ್ತಾನದಲ್ಲಿ— ಹಿಂದೂಗಳ ಪ್ರಾಣ, ಧನ, ಸ್ತ್ರೀಜನಕ್ಕೆ ಭದ್ರತೆಯಿಲ್ಲ. ಆದರೆ ಕಾಂಗ್ರೆಸ್ಸಿನ ಪ್ರಾಂತಗಳಲ್ಲಿ ಮುಸ್ಲಿಮರು ಸುರಕ್ಷಿತರಾಗಿರಬಹುದು. ಕಾಂಗ್ರೆಸ್ಸಿಗರೇನೂ ಅಲ್ಲದ ಶಾಸ್ತ್ರಿಗಳಿಂದ ಬಂದ ಈ ಪ್ರಶಂಸಾವಾಕ್ಯ ಕಾಂಗ್ರೆಸ್ಸಿಗೆ ಇನ್ನಷ್ಟು ಭೂಷಣಾಸ್ಪದವಾಗಿದೆ. ಶಾಸ್ತ್ರಿಯವರು ಮುಂದುವರಿಯುತ್ತ ಜಿನ್ನಾ ಸಾಹೇಬರು ತಾವಾಗಿ ಒಮ್ಮೆ ಕೈಬಿಟ್ಟ ಪಾಕಿಸ್ತಾನ ಪುನಃ ಅವರ[illegible] ಲಭಿಸಲಾರದೆಂದೂ ಹೇಳಿದ್ದಾರೆ.

#### ಬ್ರಿಟಿಶ ಕೈವಾಡ

ಮಿರತ ಕಾಂಗ್ರೆಸಿಗಾಗಿ ಹೊರಟಿರುವ ಗಡಿನಾಡ ಗಾಂಧಿ ಅಬ್ದುಲ ಗಫರ ಖಾನರು ಜಾತೀಯ ಗಲಭೆಗಳ ಕಾರಣಗಳನ್ನು ಕುರಿತು ಆಡಿದ ಮಾತುಗಳು ಮನನೀಯವಾಗಿವೆ. ಜಾತಿ ಗಲಭೆಗಳು ಹುಟ್ಟಿದ್ದು ಬ್ರಿಟಿಶರಿಂದ ಮತ್ತು ಅವರಿಲ್ಲಿರುವವರೆಗೆ ಅವು ನಡೆಯುತ್ತಲೆ ಹೋಗುವವು ಎಂದವರು ನಿರ್ಣಯಿಸಿ ಬಿಟ್ಟಿದ್ದಾರೆ. ಪ್ರೇಮ ಸಂದೇಶವನ್ನು ಗಡಿನಾಡಿಗೆ ತಂದ ಪಂ. ಜವಾಹರಲಾಲರಿಗೆ ಗುಡ್ಡಗಾಡಿನಿಂದ ಗುಂಡುಗಳ ಸ್ವಾಗತ ಸಿಕ್ಕಿತು. ಆದರೆ ಪಾರತಂತ್ರ್ಯದ ಸಂದೇಶ ತಂದ ವಾಯಿಸರಾಯರಿಗೆ ಹೃತ್ಪೂರ್ವಕಸ್ವಾಗತ ದೊರೆಕಿತು. ಅಂದ ಮೇಲೆ ಗುಡ್ಡಗಾಡಿನ ಜನರ ಮೂಲಕ ಈ ತಂತ್ರ ನಡೆಸಿದ ರಾಜಕೀಯ ಖಾತೆಯವರೆ ಎಂದು ಸ್ಪಷ್ಟವಾ[illegible]ವದಿಲ್ಲವೆ? ಹಿಂದುಸ್ತಾನ ಲೀಗ ಸಂಧಿ ಕಾಲದ[illegible]ಲ್ಲಿದೆ. ಇಂಥ ಸಮಯದಲ್ಲಿ ಗಲಭೆಗಳಾಗುವದು ಸಹಜ ಇದೇ ಸಂಧಿಸಾಧಿಸಿ ಸ್ವಾರ್ಥಪರಾಯಣರು ದಾಸ್ಯಶೃಂಖಲೆಯನ್ನು ಬಿಗಿಗೊಳಿಸಿ ಅದರ ಪ್ರಯೋಜನ ಪಡೆಯಬೇಕೆಂದಿದ್ದಾರೆ. ಅದುದರಿಂದ ಜಾತಿಸೌಹಾರ್ದ ಸ್ಥಾಪಿಸಿ ಬ್ರಿಟಿಶರನ್ನು ನಾವೆಲ್ಲ ಸೇರಿ ಮೊದಲು ಹೊರಡಿಸಬೇಕೆಂದು ಗಫರ ಖಾನರು ಉಪದೇಶಿಸಿದ್ದಾರೆ.

---

ಮೂಜಾಳಿಯಲ್ಲಿ ಗೋವೆಗೆ ಹೋಗುವ ಅಕ್ಕಿ ಬೆಲ್ಲವನ್ನು ರಾಷ್ಟ್ರಸೇವಾದಲದವರು ಹಿಡಿದು ಕೊಟ್ಟಿರುವರು.



# ಅಂತರ್ ರಾಷ್ಟ್ರೀಯ

## ಯುಕ್ತರಾಷ್ಟ್ರ ಸಂಘದಲ್ಲಿ

ನೈಋತ್ಯ ಆಫ್ರಿಕೆಯನ್ನು ಎಣ್ಣೆ ಹಚ್ಚಿ ನುಂಗಿ[illegible] ಜನರಲ್ ಸ್ಮಟ್ಸರ ಪ್ರಯತ್ನಕ್ಕೆ ಹಿಂದು[illegible]ದ ಪ್ರಯತ್ನದಿಂದ ಮತ್ತು ಇತರ ರಾಷ್ಟ್ರ[illegible] ಬೆಂಬಲದಿಂದ— ಅರವಾಳ :ಬಿತ್ತೆಂದು ಹೇಳಬಾರದಿದ್ದರೂ— ಅ ತುತ್ತು ಅವರ ಗಂಟಲಲ್ಲಿ ಸಿಕ್ಕಿಬಿತ್ತೆಂದು ಧಾರಾಳವಾಗಿ ಹೇಳಬಹುದು. ಬ್ರಿಟನ್ ಒಂದರಹೊರತು ಅವರಿಗೆ ಬೇರೊಬ್ಬರ ಬೆಂಬಲವೂ ಸಿಕ್ಕಲಿಲ್ಲ. ನೈಋತ್ಯ ಆಫ್ರಿಕೆಯ ಜನರೇ ದಕ್ಷಿಣ ಆಫ್ರಿಕೆಯಲ್ಲಿ ಸೇರಿಕೊಳ್ಳಲು ಅಪೇಕ್ಷಿಸಿದ್ದಾರೆಂಬ ಸೋಗು ಹಿಂದೀ ಪ್ರತಿನಿಧಿಗಳ ಅಭಿಯೋಗದ ಮುಂದೆ ಬಹಳ ಪರಿಣಾಮಕಾರಿಯಾಗಲಿಲ್ಲ. ಯುರೋಪಿಯನ್ನರಿಗಿಂತ ನಾಲ್ಕು ಪಾಲು ಹೆಚ್ಚು ಮೂಲ ನಿವಾಸಿಗಳುಳ್ಳ ನೈಋತ್ಯ ಆಫ್ರಿಕೆಯಲ್ಲಿ ಹೇಗೆ ಯುರೋಪಿಯನ್ನರ ವಿದ್ಯಾಭ್ಯಾಸಕ್ಕಿಂತ ಮೂಲ ನಿವಾಸಿಗಳ ವಿದ್ಯಾಭ್ಯಾಸಕ್ಕೆ ಕಡಿಮೆ ಹಣವನ್ನು ವೆಚ್ಚಮಾಡಲಾಗುತ್ತಿದೆ, ಹೇಗೆ ಮೂಲ ನಿವಾಸಿಗಳು ಸ್ವದೇಶದಲ್ಲಿಯೇ ಅಪ್ಪಣೆ ಚೀಟಿ [illegible]ದೆ ಒಂದೆಡೆಯಿಂದ ಒಂದೆಡೆಗೆ ಪ್ರಯಾಣ ಮಾಡುವಂತಿಲ್ಲ, ಎಂಬ ಮೊದಲಾದ ಅಂಶಗಳನ್ನು ಹಿಂದೀ ಪ್ರತಿನಿಧಿಗಳು ಹೊರಗೆಡಹಿದ. ಆಫ್ರಿಕೆಯ ಬಿಳಿಯರು ನೈಋತ್ಯ ಆಫ್ರಿಕೆಯಲ್ಲಿ ನಡೆಸಿದ ಅದಿಷ್ಟ ಆಳಿಕೆಯ ನಿಜ[illegible]ವನ್ನು ಬಯಲಿಗೆಳೆದರು. ಇದೆಲ್ಲದರ ಪರಿಣಾಮವಾಗಿ ಈ ಪ್ರಶ್ನೆಯನ್ನು ಚರ್ಚಿಸಲು ಒಂದು ಉಪಸಮಿತಿಯನ್ನು ನೇಮಿಸುವ ನಿರ್ಣಯವಾಯಿತು. ಉಪಸಮಿತಿಯಲ್ಲಾದರೂ ಹಿಂದೀಯರು ಸ್ಮಟ್ಸರ ಸಾಮ್ರಾಜ್ಯಲಾಲಸೆಯ ವಿರುದ್ಧ ಹೋರಾಡುವದಾಗಿ ಸಾರಿದ್ದಾರೆ.

ದಕ್ಷಿಣ ಆಫ್ರಿಕೆಯ ಹಿಂದೀಯರ ಪ್ರಶ್ನೆಯಲ್ಲಿಯೂ ತಾವು ನಿಂತ ನೆಲದ ಭರವಸೆಯಿಲ್ಲದೆ ಜನರಲ್ ಸ್ಮಟ್ಸರು ಯುಕ್ತರಾಷ್ಟ್ರ ಸಂಘದ ಕಕ್ಷೆಯಿಂದ ಹೇಗಾದರೂ ಅದನ್ನು ಹೊರಗೆಳೆಯಬೇಕೆಂದು ಸಂಚು ನಡೆಸಿರುವ ಸುದ್ದಿಯಿದೆ. ಪ್ರಶ್ನೆಯನ್ನು ಅಂತರರಾಷ್ಟ್ರೀಯ ನ್ಯಾಯಸ್ಥಾನದ ಮುಂದೆ ತರಬೇಕೆಂದು ಅವರು ಒತ್ತಾಯಗೊಳಿಸಿರುವರು. ಹೀಗಾದರೆ ಯುಕ್ತರಾಷ್ಟ್ರ ಸಂಘದಲ್ಲಿ ಅದನ್ನು ಚರ್ಚಿಸುವದು, ನ್ಯಾಯಾಲಯದಲ್ಲಿರುವ ಪ್ರಶ್ನೆಯೆಂಬ ಕಾರಣದಿಂದ, ಅಸಮಂಜಸವಾಗುವದು. ಆ ನ್ಯಾಯಾಲಯದ ನಿರ್ಣಯವೇನಾಗುವದೋ ಪರಮಾತ್ಮನೇ ಬಲ್ಲ.

## ಹಿಂದುಸ್ತಾನದ ಸೋಲು

ಯುಕ್ತರಾಷ್ಟ್ರ ಭದ್ರತಾಮಂಡಲದ ಅಶಾಶ್ವತ ಸದಸ್ಯರು ಮೂವರು ಈ ಬಾರಿ ನಿವೃತ್ತರಾಗುವದರಿಂದ ಅವರ ಸ್ಥಾನಗಳಿಗೆ ಹೊಸ ರಾಷ್ಟ್ರಗಳನ್ನಾರಿಸುವದು ಸಭೆಯ ಮುಂದಿತ್ತು. ಹಿಂದುಸ್ತಾನ ಸೇರಿ ನಾಲ್ವರು ಈ ಸ್ಥಾನಕ್ಕೆ ಹುರಿಯಾಳುಗಳಾಗಿದ್ದರು. ಹಿಂದುಸ್ತಾನದ ಹಕ್ಕನ್ನು ಕಸುವಿನಿಂದ ಬಿಂಬಿಸಲಾಗಿತ್ತು. ಆದರೆ ದುರ್ದೈವದಿಂದ ಹಿಂದುಸ್ತಾನ ಆರಿಸಿಬರಲಿಲ್ಲ. ಬೆಲ್ಜಿಯಂ ಕೋಲಂಬಿಯಾ, ಸೀರಿಯಾಗಳು ಆರಿಸಿಬಂದವು. ಬೆಲ್ಜಿಯಂ ಕೋಲಂಬಿಯಾಗಳ ಆಯ್ಕೆ ಸಾಧಾರಣ ಪೂರ್ವನಿಶ್ಚಿತವಾಗಿಯೆ ಇತ್ತು. ಸಿರಿಯಾ ಹಿಂದುಸ್ತಾನಗಳಲ್ಲಿ ನಿಜವಾದ ಸ್ಪರ್ಧೆಯಿತ್ತು. ದಕ್ಷಿಣ ಅಮೇರಿಕನ್ ಗುಂಪಿನ ಬೆಂಬಲವಿದ್ದರೆ ಹಿಂದುಸ್ತಾನ ಆರಿಸಿ ಬರುವದು ಎಂಬ ಭರವಸೆಯಿತ್ತು. ಆದರೆ ಮತಗಣನೆಯಲ್ಲಿ ಹಿಂದುಸ್ತಾನಕ್ಕೆ ಕೇವಲ ೧೩ ಮತಗಳು ಬಿದ್ದಿದ್ದವು. ಬ್ರಿಟಿಶ್ ಸಾಮ್ರಾಜ್ಯಗುಂಪೂ ಸೋವಿಯಟ್ ಗುಂಪೂ ಹಿಂದುಸ್ತಾನದ ಪರವಾಗಿ ಮತ ಕೊಟ್ಟವೆಂದು ನಂಬಲಾಗಿದೆ.

## ಹಿಂದುಳಿದವರ ಪಕ್ಷದಲ್ಲಿ

ವರ್ಣದ್ವೇಷ ಮತ್ತು ಪಕ್ಷಪಾತವನ್ನು ಖಂಡಿಸುವ ಇಜಿಪ್ತದ ಗೊತ್ತುವಳಿ ಒಮ್ಮತದಿಂದ ಸ್ವೀಕೃತವಾಯಿತು.

ಪಶ್ಚಿಮ ಸಾಮೋವಾ ದೇಶದ ವಿಶ್ವಸ್ತಿಕೆಯನ್ನು ತಾನು ನಡೆಸುವ ಸಲುವಾಗಿ ನ್ಯೂಝೀಲಂಡು ಸಿದ್ಧಗೊಳಿಸಿ ಸಾದರು ಪಡಿಸಿರುವ ಯೋಜನೆಯ ಚರ್ಚೆ ನಡೆದಾಗ ವಿಶ್ವಸ್ತಿಕೆಸಮಿತಿಯಲ್ಲಿ ಹಿಂದೀಪ್ರತಿನಿಧಿಗಳು ಹಿಂದುಳಿದ ಭೂಭಾಗಗಳ ಪರವಾಗಿ ವಾದಿಸಿದರು. ವಿಶ್ವಸ್ತಿಕೆಯನ್ನು ಯಾವುದೊಂದು ವಿಶಿಷ್ಟ ರಾಷ್ಟ್ರಕ್ಕೆ ಒಪ್ಪಿಸದೆ ಎಲ್ಲವನ್ನೂ ಯುಕ್ತರಾಷ್ಟ್ರ ಸಂಸ್ಥೆಯೇ ನೋಡಿಕೊಳ್ಳಬೇಕೆಂದು ಅವರ ಸೂಚನೆ. ವಿಶಿಷ್ಟರಾಷ್ಟ್ರಕ್ಕೆ ಅದನ್ನೊಪ್ಪಿಸಿದರೆ ಹಿಂದುಳಿದ ಜನಾಂಗಗಳನ್ನು ಸ್ವಾತಂತ್ರ್ಯಕ್ಕಾಗಿ ಸಿದ್ಧಗೊಳಿಸುವ ಧ್ಯೇಯ ಮೂಲೆಗುಂಪಾಗಿ ವಿಶ್ವಸ್ತ ರಾಷ್ಟ್ರದ ಹಿತಸಂಬಂಧದ್ದೇ ಮೇಲ್ಗೈಯಾಗುತ್ತದೆ. ಯುಕ್ತರಾಷ್ಟ್ರಗಳಾದರೆ ಇದಕ್ಕೂ ಹೆಚ್ಚು ನ್ಯಾಯ್ಯ ತೋರಿಸಬಹುದು, ಎಂಬುದಾಗಿ ಅವರು ವಾದಿಸಿದರು. ಹಿಂದೀ ಪ್ರತಿನಿಧಿಗಳ ವಿಚಾರಗಳು "ವಿಚಾರಾರ್ಹ"ವಿದ್ದರೂ ಅವು ನ್ಯೂಝೀಲಂಡಿಗೆ ಸಮ್ಮತವಿಲ್ಲ ಎಂದು ನ್ಯೂಝೀಲಂಡ ಪ್ರತಿನಿಧಿಗಳು ಉದ್ವಿಗ್ನರಾಗಿ ನುಡಿದರು. ವಿಚಾರ ಇನ್ನೂ ಚರ್ಚೆಯಲ್ಲಿದೆ.

## ಬ್ರಿಟಿಶ ಕೂಲಿಕಾರ ಪಕ್ಷದಲ್ಲಿ ಒಡಕು

ಒಂದು ವರ್ಷ ರಾಷ್ಟ್ರದ ಕರ್ಣಧಾರರಾಗಿ ಸಾಗಿಸಿಕೊಂಡುಹೋದ ಬ್ರಿಟಿಶ ಕೂಲಿಕಾರ ಮಂತ್ರಿಗಳ ಧೋರಣದ ವಿರುದ್ಧ ಪಾರ್ಲಮೆಂಟನಲ್ಲಿ ಅವರ ಪಕ್ಷದಲ್ಲೆ ಉಂಟಾದ ಅಸಂತೋಷ ಕಳೆದವಾರ ಬ್ರಿಟಿಶ ಪಾರ್ಲಿಮೆಂಟನಲ್ಲಿ ಬಹಿರಂಗವಾಗಿ ಕಾಣಿಸಿಕೊಂಡಿತು. ಸರಕಾರದ ಭಾವೀ ಧೋರಣೆಯನ್ನು ಕುರಿತಾದ ಅರಸನ ಭಾಷಣದ ವಿದೇಶ ಧೋರಣೆಗೆ ಸಂಬಂಧ ಪಟ್ಟ ಭಾಗಗಳನ್ನು ಟೀಕಿಸಿ ಕೂಲಿಕಾರ ಪಕ್ಷದ ಕೆಲ ಸದಸ್ಯರು–೪೪ ಜನರು–ಉಪಸೂಚನೆ ಮಂಡಿಸಿದರು. ಈ "ಬಂಡುಗಾರ" ಸದಸ್ಯರು ಬೆವಿನ್ನರ ದಿನದಿನಕ್ಕೂ ರಶಿಯಾ ವಿರೋಧಿ ಹಾಗು ಅಮೇರಿಕಾಧೀನವಾಗುತಿರುವ ವಿದೇಶ ಧೋರಣದಿಂದ ಗಾಬರಿಯಾಗಿ, ಅವು ಚುನಾವಣಿಯಲ್ಲಿ ಕೂಲಿಕಾರಪಕ್ಷ ಪ್ರತಿಪಾದಿಸಿದಂತೆ, ಹೆಚ್ಚು ಪ್ರಗತಿಶೀಲವಾಗಬೇಕು, ರಶಿಯಾದೊಡನೆ ಮೈತ್ರಿ ಬೆಳೆಸಬೇಕು ಎಂದು ಸೂಚಿಸಿದ್ದರು. ಪಾರ್ಲಮೆಂಟನಲ್ಲಿ ಅದನ್ನು ಮಂಡಿಸಿದ ಸದಸ್ಯ ಕ್ರಾಸ್ಮನ್ನರು ಕೂಲಿಕಾರ ಸರಕಾರದ ಧೋರಣೆ ಒಳಗೆ ಸಾಮ್ಯವಾದಿ ಹೊರಗೆ ತದ್ವಿರುದ್ಧವಾಗಿದೆಯೆಂದು ಟೀಕಿಸಿದರು. ರಶಿಯಾದ ವಿರುದ್ಧ ಪ್ರತಿಯೊಂದರಲ್ಲಿಯೂ ಬ್ರಿಟನ್ನು ಅಮೇರಿಕೆಯೊಡನೆ ಮತವಿತ್ತಿದೆಯೆಂದೂ ಅವರು ಆಕ್ಷೇಪಿಸಿದರು. ಮುಖ್ಯ ಮಂತ್ರಿ ಅಟ್ಲಿಯವರು ದೀರ್ಘ ಉತ್ತರ ಕೊಟ್ಟು ರಶಿಯಾದೊಡನೆ ಮೈತ್ರಿ ಬೆಳೆಯದಿರಲು ರಶಿಯನ್ ಸರಕಾರದ ತಪ್ಪೇ ಕಾರಣವೆಂದು ತೋರಿಸಲು ಹೆಣಗಿದರು. ಉಪಸೂಚನೆಯ ಸೂಚಕರು ಅದನ್ನು ಹಿಂತೆಗೆದುಕೊಳ್ಳಲು ಸಭೆ ಅಪ್ಪಣೆ ಕೊಡಲಿಲ್ಲವಾದುದರಿಂದ ಮತದಾನವಾಗಿ ೩೫೩ ವಿರುದ್ಧ ಶೂನ್ಯಮತದಿಂದ ಅದು ಬಿದ್ದುಹೋಯಿತು. ಕಾನ್ಸರ್ವೇಟಿವರೂ ಲಿಬರಲ್ಲರೂ ಸರಕಾರಕ್ಕೇ ಬೆಂಬಲವಿತ್ತರು. ಸರಕಾರ ವಿಜಯಿಯಾಯಿತು—ಎಲ್ಲಾ ಸರಿ. ಆದರೆ ಅಟ್ಲಿಯವರೂ ಅವರ ಸಹಯೋಗಿಗಳೂ ಚಿಂತಾಕ್ರಾಂತರಾಗಿದ್ದಾರಂತೆ. ಕಡಿಮೆಯೆಂದರೆ ೧೦೦ ಕೂಲಿಕಾರ ಸದಸ್ಯರು ಬೇಕೆಂದೇ ಮತವನ್ನೇ ಕೊಟ್ಟಿರಲಿಲ್ಲ. ಅವರಷ್ಟು ಜನರು "ಬಂಡುಗಾರ"ರ ವಿಚಾರಗಳೊಡನೆ ಸಹಮತರಾಗಿದ್ದಾರೆಂದು ಇದರಿಂದ ಸ್ಪಷ್ಟವಾಗಿದೆ. ತಮ್ಮ ಪಕ್ಷದಲ್ಲಿಯೇ ಇಷ್ಟೊಂದು ಪ್ರಬಲವಾದ ಗುಂಪೊಂದು ವಿದೇಶ ಧೋರಣೆಯೊಡನೆ ಅಸಹಮತವಾಗಿರುವದನ್ನು ಕಂಡು ಮುಖ್ಯಮಂತ್ರಿಗಳು ಚಡಪಡಿಸುವದು ಸಹಜವೆ. ಅಷ್ಟಾದರೆ ಅಪೇಕ್ಷಿತ ಪರಿಣಾಮವಾದಂತೆ, ಎಂಬದಾಗಿ "ಬಂಡುಗಾರ"ರೂ ಭಾವಿಸಿದ್ದಾರೆ.

## ಅಂತರರಾಷ್ಟ್ರೀಯ ಸಂಬಂಧ

ಬ್ರಿಟಿಶ ಸಾಮ್ರಾಜ್ಯಲಾಲಸೆ ಮತ್ತು ಅಮೇರಿಕೆಯ "ಡಾಲರ ಸಾಮ್ರಾಜ್ಯ"ದ ವಿರುದ್ಧ ಸೋವಿಯಟ್ ಪತ್ರಿಕೆ ಆಕಾಶವಾಣಿಗಳಲ್ಲಿಯೂ ಸೋವಿಯಟ್ ಸರ್ವಾಧಿಕಾರದ ವಿರುದ್ಧ ಅಮೇರಿಕನ್ ಪತ್ರಿಕೆಗಳಲ್ಲಿಯೂ ತೀಕ್ಷ್ಣ ಪ್ರಚಾರ ನಡೆದಿದ್ದರೂ ಈ ಕೆಲ ದಿನಗಳಲ್ಲಿ ಪ್ರಬಲ ರಾಷ್ಟ್ರಗಳ ಸಂಬಂಧ ತುಸು ಸುಧಾರಿಸಿದೆಯೆನ್ನಬೇಕು. ವಿದೇಶ ಮಂತ್ರಿ ಸಭೆಯಲ್ಲಿ ಪಂಚ ಮಹಾರಾಷ್ಟ್ರಗಳ ಪ್ರತಿನಿಧಿಗಳು ಟ್ರೀಸ್ಟೆಯ ಆಡಳಿತವನ್ನೂ ಅದರ ಗವರ್ನರನ ಕರ್ತವ್ಯ ಅಧಿಕಾರಗಳನ್ನೂ ಕುರಿತು ಕೆಲವೇ ದಿನಗಳಲ್ಲಿ ಅನೇಕ ಮುದ್ದೆಗಳಲ್ಲಿ ಒಮ್ಮತರಾದುದು ಈ ಸೌಹಾರ್ದದ ಒಂದು ಚಿಹ್ನವಾಗಿರಬಹುದು. ಇದಲ್ಲದೆ ಜರ್ಮನಿಯ ಬ್ರಿಟಿಶ ವಿಭಾಗದಲ್ಲಿದ್ದ ತೀವ್ರವಾದ ಆಹಾರ ಕೊರತೆಯನ್ನು ಕಂಡುಕಂಡೂ ಸುಮ್ಮನಿದ್ದ ಸೋವಿಯಟ್ ಸರಕಾರ ಈಗ ಆ ಭಾಗಕ್ಕೆ ದೊಡ್ಡ ಪ್ರಮಾಣದಲ್ಲಿ ಧಾನ್ಯಗಳನ್ನು ಕಳಿಸತೊಡಗಿದೆ. ಆದರೆ ಇದಲ್ಲ ಎಷ್ಟು ದಿನದ ಯಾವ ಉದ್ದೇಶದ ಮಾತೋ ಹೇಳಬರುವದಿಲ್ಲ.

## ಬಾಲ್ಕನದ ಜ್ವಾಲಾಮುಖಿ

ಮುಂದಿನ ಯುದ್ಧದ ಅಂಕುರ ಬಾಲ್ಕನದಲ್ಲೇ ಒಡೆಯುವದೆ? ಈ ಪ್ರಶ್ನೆ ಇಂದು ರಾಜಕೀಯ ಚಿಂತಕರನ್ನು ಕಾಡತೊಡಗಿದೆ. ಯುರೋಪಿನ ಆ ಭಾಗದಲ್ಲಿದ್ದಷ್ಟು ಅನಿಶ್ಚಿತತೆ ಬೇರೊಂದೆಡೆಯಲ್ಲಿಲ್ಲ. ಅಲ್ಲಿ ಪರಸ್ಪರ ವಿರುದ್ಧ ತತ್ವಗಳ ಸಂಘರ್ಷ ನಡೆದಿದೆ. ಚುನಾವಣೆ, ಅರಸನ ಮರಳುವಿಕೆ, ಇವುಗಳಿಂದ ಗ್ರೀಸಿನ ಸ್ಥಿತಿಯಲ್ಲಿ ಯಾವ ಸುಧಾರಣೆಯೂ ಆಗಿಲ್ಲ. ಮೆಸಿಡೋನಿಯಾದ ಸ್ವಾಮಿತ್ವಕ್ಕಾಗಿ ಎಡ ಪಕ್ಷಗಳು ಕೂಟಯುದ್ಧವನ್ನು ನಡೆಸಿವೆ. ಅದರ ತೀಕ್ಷ್ಣತೆ ದಿನದಿನಕ್ಕೂ ಹೆಚ್ಚುತಿದೆ. ಬಂಡುಗಾರರಿಗೆ ಯುಗೊಸ್ಲಾವಿಯಾದಲ್ಲಿ ಆಶ್ರಯವಿದೆಯೆಂದು ಗ್ರೀಕ ಸರಕಾರದ ದೂರು. ಈ ದಂಗೆಯನ್ನು ಬಗ್ಗು ಬಡಿಯುವ ವಿಚಾರ ಮಾಡಲೋ ಏನೋ, ಗ್ರೀಕ ಸೇನಾಪತಿ ಮಂಡಲದ ಮುಖ್ಯಸ್ಥನು ಬ್ರಿಟಿಶ ಸೇನಾಧಿಕಾರಿಯೊಡನೆ ಇಂಗ್ಲಂಡಿಗೆ ಹೋಗಿದ್ದಾನೆ. ನಾಲ್ಕು ನೆರೆಹೊರೆಯ ರಾಷ್ಟ್ರಗಳ ಮೇಲೆ ದಂಗೆಗಾರರಿಗೆ ಸಹಾಯ ಮಾಡುತಿರುವ ಆರೋಪ ಹೊರಿಸಿ ಗ್ರೀಸು ಯುಕ್ತರಾಷ್ಟ್ರ ಸಂಘಕ್ಕೆ ದೂರು ಕೊಟ್ಟಿದೆ. ಅಲ್ಬೇನಿಯಾವಾದರೂ ತನಗೆ ಸೇರಿದ ಸಮುದ್ರ ಭಾಗದಲ್ಲಿ ಬ್ರಿಟಿಶ ಯುದ್ಧ ಹಡಗುಗಳು ಪ್ರವೇಶಿಸಿವೆಯೆಂದು ಯುಕ್ತ ರಾಷ್ಟ್ರ ಸಂಘಕ್ಕೆ ದೂರಿಕೊಂಡಿದೆ. ಸಾಮ್ಯವಾದಿಗಳಿಗೂ ಪ್ರತಿಗಾಮಿಗಳಿಗೂ ಗ್ರೀಸದಲ್ಲಿ ನಡೆದ ಎಳೆದಾಟದ ಪರಿಣಾಮವಾಗಿ ಪ್ರಬಲ ರಾಷ್ಟ್ರಗಳು ಪರಸ್ಪರ ಕಲಹದಲ್ಲಿ ಕೈಸಿಗಿಸಿಕೊಳ್ಳಬೇಕಾಗುವಂತೆ ತೋರುತ್ತದೆ.

## ಇಜಿಪ್ತದಲ್ಲಿ ಅಶಾಂತಿ

ಆಂಗ್ಲೊ-ಇಜಿಪ್ಶನ್ ಒಪ್ಪಂದದ ಪುನರ್ವಿಮರ್ಶೆಗಾಗಿ ಉಭಯ ಪಕ್ಷಗಳ ಪ್ರತಿನಿಧಿಗಳ ಸಭೆಗಳು ಈಗ ಕೆಲತಿಂಗಳುಗಳಿಂದ ಸಾಗಿದ್ದರೂ ಮತ್ತೆ ಮತ್ತೆ ಅವು ಸ್ಥಗಿತವಾಗುತ್ತಿರುವದರಿಂದ ಜನರಲ್ಲಿ ಬ್ರಿಟಿಶರ ಮೇಲೆ ಸಂಶಗು ಬಲಗೊಳ್ಳತೊಡಗಿದೆ. ಇಜಿಪ್ತದಿಂದ ಸೈನ್ಯ ಹಿಂತೆಗೆದುಕೊಳ್ಳುವದು; ಗಂಡಾಂತರ ಸಮಯದಲ್ಲಿ ಉಭಯತರ ಸಹಕಾರದ ಸ್ವರೂಪ; ಮತ್ತು ಸುಡಾನದ ಭವಿತವ್ಯ ಇವೇ ಮುಖ್ಯ ವಾದಗ್ರಸ್ತ ವಿಷಯಗಳು. ಸೈನ್ಯ ಹಿಂತೆಗೆದುಕೊಳ್ಳುವ ಪ್ರಶ್ನೆ ಸುಲಭದಲ್ಲಿ ಬಗೆಹರಿಯಬಹುದಾದರೂ ಉಳಿದೆರಡು ವಿಷಯಗಳಲ್ಲಿ ಬ್ರಿಟಿಶ ಬೇಡಿಕೆಗಳು ಇಜಿಪ್ತದ ಸ್ವಾತಂತ್ರ್ಯಕ್ಕೆ ಧಕ್ಕೆತರಬಹುದೆಂದು ಇಜಿಪ್ಶನ್ನರ ಭೀತಿ. ಮುಖ್ಯ ಮಂತ್ರಿ ಸಿದಿಕಿ ಪಾಶಾ ಅವರು "ಇಜಿಪ್ತನ್ನು ಬ್ರಿಟನ್ನಿಗೆ ಮಾರಿ ಬಿಡುವರೆಂ"ಬ ಕೂಗು ಎದ್ದಿದೆ. ಮುಖ್ಯವಾಗಿ ವಿದ್ಯಾರ್ಥಿಗಳು ದೊಡ್ಡ ಪ್ರಮಾಣದಲ್ಲಿ ಗಲಭೆಗಳನ್ನು ನಡೆಸಿದ್ದು ಮಂತ್ರಿಮಂಡಲ ರಾಜೀನಾಮೆ ಕೊಡಬೇಕು, ಬ್ರಿಟಿಶರು ಒಡನೆ ಹೊರಟು ಹೋಗಬೇಕು, ಸುಡಾನು ಇಜಿಪ್ತದಲ್ಲಿ ಸೇರಬೇಕು ಎಂಬುದಾಗಿ ಹುಯಿಲೆಬ್ಬಿಸಿದ್ದಾರೆ. ವಿದ್ಯಾರ್ಥಿಗಳ ಚಟುವಟಿಕೆಗಳ ವರದಿಯ ಮೇಲೆಯೇ ಬಹಿಷ್ಕಾರ ಹಾಕುವಷ್ಟು ಮಟ್ಟಿಗೆ ಸರಕಾರ ಭೀತವಾಗಿದೆ.

## ಇಂಡೋನೇಶಿಯಾದಲ್ಲಿ ಒಡಂಬಡಿಕೆ

ಅನೇಕ ವಾರಗಳ ಚರ್ಚೆಯ ನಂತರ ಇಂಡೊನೇಶಿಯಾ–ಡಚ್ ವಿವಾದ ಬಗೆಹರಿಯುವಂತೆ ಉಭಯಸಮ್ಮತವಾದ ಯೋಜನೆಯೊಂದನ್ನು ಡಚ್ ಪ್ರತಿನಿಧಿಗಳೂ ಇಂಡೋನೇಶಿಯನ್ ಪ್ರಜಾರಾಜ್ಯದ ಪ್ರತಿನಿಧಿಗಳೂ ಕಂಡು ಹಿಡಿದಿದ್ದಾರೆ. ಈ ಯೋಜನೆಯನ್ವಯ ಇಂಡೊನೇಶಿಯನ್ ಪ್ರಜಾರಾಜ್ಯ(ಜಾವಾ ಸುಮಾತ್ರಾ), ಬೋರ್ನಿಯೊ ಮೊದಲಾದ ಡಚ್ ಈಸ್ಟ ಇಂಡೀಜ ಪ್ರದೇಶಗಳ ಸಂಯುಕ್ತರಾಜ್ಯ ಸ್ಥಾಪನೆಯಾಗಬೇಕು; ವಿದೇಶ ಸಂಬಂಧ, ಸಂರಕ್ಷಣ, ಮತ್ತು ಹಣಕಾಸು ಸಂಯುಕ್ತರಾಜ್ಯದಕೈಯಲ್ಲಿರಬೇಕು. ಈ ಸಂಯುಕ್ತರಾಜ್ಯ ನೆದರ್ಲಂಡ್ಸ ರಾಜ್ಯದೊಡನೆ ಸ್ವತಂತ್ರ ಸಮಾನ ಪಾಲುಗಾರಿಕೆಯಲ್ಲಿ ಸೇರಬೇಕು; ಸಂಯುಕ್ತರಾಜ್ಯದ ಅಯಾಘಟಕಗಳಿಗೆ ಮೇಲೆ ಹೇಳಿದ ಮೂರು ವಿಷಯ ಹೊರತು ಉಳಿದೆಲ್ಲ ಅಧಿಕಾರ ಸೇರಬೇಕು; ಈ ಪ್ರಕಾರ ಘಟನೆ ಸಿದ್ಧವಾಗುವವರೆಗೆ ೨ ವರ್ಷಕಾಲ ಸಂಕ್ರಾಂತಿಕಾಲವೆಂದೆಣಿಸಬೇಕು; ಅನಂತರ ಇಂಡೊನೇಶಿಯಾದ ಸಂಯುಕ್ತರಾಜ್ಯ ಯುಕ್ತರಾಷ್ಟ್ರಸಂಘದ ಸದಸ್ಯತ್ವವನ್ನು ಪಡೆಯಬೇಕು; ಬೋರ್ನಿಯೋ ಇತ್ಯಾದಿ ಘಟಕಗಳಿಗೆ ಇಂಡೊನೇಶಿಯಾ ರಾಜ್ಯದಿಂದ ಹೊರಬೀಳುವ ಹಕ್ಕಿರಬೇಕು; ೩೦ ವರ್ಷಗಳ ನಂತರ ಇಂಡೊನೇಶಿಯಾ, ಡಚ್ ಸಾಮ್ರಾಜ್ಯದೊಡನೆಸಂಬಂಧ ಕಡಿದುಕೊಳ್ಳಲು ಸ್ವತಂತ್ರವಿದೆ.

ಈ ಯೋಜನೆಯಿಂದ ಇಂಡೊನೇಶಿಯಾದ ಕೆಲ ಅತಿರೇಕವಾದಿಗಳನ್ನು ಬಿಟ್ಟರೆ ಇತರರಿಗೆ ತೃಪ್ತಿಯಾದ ಲಕ್ಷಣವಿದೆ. ಆದರೆ ಇದಕ್ಕೆ ಡಚ್ ಸರಕಾರದ ಸಮ್ಮತಿಮುದ್ರೆ ಇನ್ನೂ ದೊರಕಬೇಕಷ್ಟೇ. ಡಚ್ ರಾಣಿ ಕೊಡಮಾಡಿದ್ದಕ್ಕಿಂತ ಈ ಯೋಜನೆ ಬಹಳ ಮುಂದೆ ಹೋಗಿರುವದರಿಂದ ಡಚ್ ಸಾಮ್ರಾಜ್ಯಲಾಲಸಿಗಳ ಕೈಮೇಲಾಗಿ ಡಚ್ ಪಾರ್ಲಮೆಂಟಿನ ಒಪ್ಪಿಗೆ ಇವಕ್ಕೆ ಸಿಗದೆ ಹೋಗುವ ಸಂಭವವೂ ಇದೆ.

# ಯಮಲೋಕದ ನ್ಯಾಯಸ್ಥಾನ

ಲೇ— ವೆಂಕಣ್ಣಾಚಾರ್ಯ ಪಪ್ಪು, ಬಿ. ಎ. ಎಲ್ ಎಲ್. ಬಿ. ವಕೀಲ ಹುಬ್ಬಳ್ಳಿ.

ಯಮ:— ಆರೋಪಿಗಳಾರು? ಮತ್ತು ಅವರ ಮೇಲಿನ ಆರೋಪ ಯಾವದು ?

ಚಾರ್ಜಶೀಟ:— ನ್ಯಾಯಸ್ಥಾನದೆದುರು ನಿಲ್ಲಿಸಲ್ಪಟ್ಟ ಶ್ರೀಯುತರು ಖಂಡಿತವಾಗಿ ಶ್ರೀ ಅಂದರೆ ಹಣದಿಂದ ಯುಕ್ತರಾದವರು-ಎಷ್ಟು ವರ್ಷ ಕೆಲಸ, ಕೆಲಸ ಎಂದು ಕೂಗಿಕೊಂಡು ಕುಳಿತವರು. ನಂತರ ವಿಶ್ವಮೇಧದ ಅವಧಿಯಲ್ಲಿ ಆಹಾರ ಖಾತೆಯ ದೊಡ್ಡ ಹುದ್ದೆಯೇ ಇವರನ್ನು ಬೆನ್ನಟ್ಟಿ ನಾಲ್ಕೇ ವರ್ಷಗಳಲ್ಲಿ ನಾಲ್ಕು ಜನ್ಮಗಳಲ್ಲಿ ಗಳಿಸಲಾರದಷ್ಟು ಹಣವನ್ನು ಗಳಿಸಿ ಮಹದಪರಾಧವನ್ನೇ ಮಾಡಿದ್ದಾರೆ. ತನ್ಮೂಲಕ ಅವರಿಗೆ ಯೋಗ್ಯ ಶಾಸನವಾಗಬೇಕು. (ಯಮ: [ನಡುವೆ ಬಾಯಿ ಹಾಕಿ] ಭೂಲೋಕದಲ್ಲಿ ಅಪಾರ ಹಣ ಗಳಿಸುವದು ಅಪರಾಧವೊ?)

ಹಣ ಗಳಿಸುವದಲ್ಲ, ಹಣ ಗಳಿಸುವ ರೀತಿ ಅಪರಾಧವೆನಿಸುವದು.

ಯಮ— ಅಂದರೆ...?

ಚಾರ್ಜ- ಇವರು ಲಂಚದ್ವಾರಾ ಕಾಂಚನಗಿರಿಗೇರಿದ್ದಾರೆ.

ಯಮ— ಅದನ್ನು ಚಾರ್ಜಶೀಟಿನಲ್ಲಿ ಸೇರಿಸಿ ಓದಿರಿ.

ಯಮ— ಏ! ಅದಕ್ಕೆ ನಿನ್ನದೇನನ್ನುವದದೆ?

ಶ್ರೀಯುತ— ತಾವು ಇಲ್ಲಿಯ ಮ್ಯಾಜಿಸ್ಟ್ರೇಟರೊ ? ತಮ್ಮ ಪಗಾರವೇನು ?

ಯಮ— ನನಗೆ ಪಗಾರವಿಲ್ಲ.

ಶ್ರೀ— ಹಾಂ, ನಿಮ್ಮ ಮನಿಯ ಅನ್ನವನ್ನುಂಡು ದೊಡ್ಡಸ್ತಿಕೆಗಾಗಿ ಕೆಲಸ ಮಾಡುವ ಗೌರವ (ಆನರರಿ) ಮ್ಯಾಜಿಸ್ಟ್ರೇಟರೆಂದು ಕಾಣುವಿರಿ. ಇದು ನನಗೆ ಮೊದಲೇ ಗೊತ್ತಿದ್ದರೆ ನನ್ನ ಗಳಿಕೆಯಲ್ಲಿ ನಿಮ್ಮ ಹಿಸೆಯನ್ನೂ ತೆಗೆದಿಡುತ್ತಿದ್ದೆ.

ಯಮ— ತುಸು ತಡಿ. ನೀನು ಎಲ್ಲಿ ಮತ್ತು ಯಾರ ಮುಂದೆ ಇರುವಿ ಇದರ ಅರಿವನ್ನು ಮಾಡಿಕೊಡುವೆ. ಲಂಚವನ್ನು ತೆಗೆದುಕೊಂಡೆಯೊ ಇಲ್ಲವೊ ಹೇಳು ಮುಂಚೆ.

ಶ್ರೀ— ನಿಮ್ಮ ಫೌಜದಾರಿ ಕಾಯಿದೆಯಲ್ಲಿ ಲಂಚದ ವ್ಯಾಖ್ಯೆ ಏನು ?

ಯಮ— ಲಂಚದ ವ್ಯಾಖ್ಯೆ ವಿವರಣೆಗಳಿಲ್ಲ. ವ್ಯಾಖ್ಯೆಯ ಸಂದಿಗೊಂದಿಗಳಿಂದ ಪಾರಾಗಲಿಕ್ಕೆ ವ್ಯಾಖ್ಯೆ ಬೇಕೆ ?

ಶ್ರೀ— ನಾವು ತಿಂದೇವೆಷ್ಟು ಅದು ಅದೀತೆಷ್ಟು. ಕಳ್ಳಪ್ಯಾಟ ಲಾಭಬಡಕರನ್ನು ಹಾಗೇ ಹೋಗಗೊಟ್ಟಿರುವಿರಿ. ಎರಿಹೆಂಟಿಯನ್ನು ಬೆಲ್ಲವೆಂದು ಮಾರಿದ್ದಾರೆ, ಅಕ್ಕಿ ಬೆಂಚ್ಚರಳನ್ನು ಅಕ್ಕಿ ಎಂದು ಮಾರಿದ್ದಾರೆ, ಕಟಿಗಿ ಕರಿಪುಡಿಯನ್ನು ಚಹಾದ ಪುಡಿಯೆಂದು ಮಾರಿದ್ದಾರೆ, ಮುಗ್ಗಜೋಳಾ ಕಗ್ಗಜೋಳಾ ಕೇಳುವದೇನು ಡೋಲಿ, ಕೇರುಗಳಿಗೆ ಒಗೆಯಲು ಅರ್ಹವಾದ ಪದಾರ್ಥಗಳನ್ನು ಸಹಾ ಕಲ್ಪನಾತೀತ ಬೆಲೆಗೆ ಮಾರಿದ್ದಾರೆ.

ಯಮ— ಲಾಭಬಡಕರ ಕಡೆ ಬೊಟ್ಟು ಮಾಡಿ ನೀವು ಲಂಚಬುರುಕರು ಪಾರಾಗಬೇಕೆನ್ನುತ್ತೀರಾ? ತಮ್ಮ ಉತ್ಪನ್ನದಲ್ಲಿಯ ನೂರರಲ್ಲಿ ೯೦ ರಷ್ಟು ಸರಕಾರಕ್ಕೆ ಕರ ರೂಪ ಕೊಟ್ಟ ಅವರೂ ಸರಕಾರದಕಡೆ ಬೊಟ್ಟುಮಾಡಿ ಪಾರಾಗಬೇಕೆನ್ನುವರು. ಸರಕಾರವಂತೂ ವ್ಯಕ್ತಿಯಲ್ಲ ಅದನ್ನು ಶಿಕ್ಷಿಸಲಿಕ್ಕೆ ಬರುವಂತಿಲ್ಲ. ಅಂದ ಮೇಲೆ......

ಶ್ರೀ— ಸಾವುಕಾರರಾದ ನಮ್ಮನ್ನು ಸರಕಾರದ ಮರಿಗಳೆಂದೇ ಎಣಿಸಿರಿ. ನಾವು ಅಧಿಕಾರಿಗಳು ತೆಗೆದುಕೊಂಡದ್ದು ಲಂಚವಲ್ಲ.

ಯ— ಲಂಚವಲ್ಲದೆ ಮತ್ತೇನು?

ಶ್ರೀ— ಕಳ್ಳಪೇಟೆ ಕುಬೇರರು ಅರ್ಥಾತ್ ಲಾಭಬಡಕರು ಆಹಾರ ಸೀದಾಧಿಕಾರಿಗಳಿಗೆ ಕೊಡುವ ಉತ್ಪನ್ನಕರ, ಲಂಚವಲ್ಲ. "ಮಾಡಬಾರದು" (Don'ts) ಪ್ರಚಾರ ಸಂಘದ ಅನೇಕ ಚಿತ್ರಗಳಿವೆ. ರೇಲ ಗಾಡಿಯ ಪೊಳಿಗಿ ಪ್ರವಾಸಿಕರು ಪೂಲಿಗೆ ಅಪ್ಪಳಿಸಿ ಸ್ವರಕ್ತ ಹೊಂಡದಲ್ಲಿ ಬಿದ್ದದ್ದು, ಅಸ್ತಿವಿಧ್ವಂಸಕ ನಂಬರ ೧ ಸಾರ್ವಜನಿಕ ಶತ್ರುಗಳ ಚಟುವಟಿಕೆ ಚಿತ್ರ, 'ಹೆಚ್ಚು ಬೆಳೆಯಿರಿ ಕಡಿಮೆ ತಿನ್ನಿರಿ' ಮುಂತಾದ ಅನೇಕ ಚಿತ್ರಗಳು ಚಿತ್ತಾಕರ್ಷಕವಾಗಿ ಗೋಡೆಗಳಿಗೆ ಅಂಟಿಸಲ್ಪಟ್ಟಿವೆ. ಲಾಭಬಡಕತನಕ್ಕಾಗಲೀ ಲಂಚಬುರುಕತನಕ್ಕಾಗಲೀ ಚಿತ್ರಗಳು ಪ್ರದರ್ಶಿಸಲ್ಪಟ್ಟಿಲ್ಲ. ಕೆಲವು ವ್ಯಂಗಚಿತ್ರಕಾರರು ಮಾತ್ರ ವೃತ್ತಪತ್ರಗಳಲ್ಲಿ ಲಾಭಬಡಕರು ಲಂಚಬುರುಕರ ಮೇಲೆ ತಮ್ಮ ಕುಂಚಿನ ಕೈಚಳಕ ತೋರಿಸಿದ್ದಾರೆ.

ಯ— ನಿಮ್ಮ ಭೂಲೋಕದ ಮಾತು ಬೇಡ. ನನ್ನ ರಾಜ್ಯದಲ್ಲಿ ನನ್ನ ಕಾಯಿದೆ ಕಟ್ಟಳೆಗಳಿಗೆ ಅನುಸರಿಸಿ ಜವಾಬ ಕೊಡಬೇಕಾಗುತ್ತದೆ. ಹಾಂ ! ಹಾಂ ! ಹಾಂ.

ಶ್ರೀ— ಯಮಲೋಕದ ಅಗದಿ ಹೊಸ ಮತ್ತು ತಿದ್ದಿದ ಸಚಿತ್ರಪಿನಲ್ ಕೋಡಿನ ಅವೃತ್ತಿಯನ್ನು (ಯಮಪಟ) ನಾನು ನೋಡಿದ್ದೇನೆ. ಅದರಲ್ಲಿ ಲಾಭಬಡಕರ ಅಥವಾ ಲಂಚಬುರುಕರ ಶಿಕ್ಷೆಯ ವಿಧಿ, ಅವಧಿ ಯಾವದೂ ಇಲ್ಲ. ಅದ್ದರಿಂದ ಇವೆರಡೂ-ಲಾಭಬಡಕತನ, ಲಂಚಬುರಕತನ-ಯಮಲೋಕದಲ್ಲಿ ಗುನ್ಹೆ ಅಂದರೆ ಅಪರಾಧವಾಗಲಾರದೆಂದು ನನ್ನ ನಮ್ರ ಅಭಿಪ್ರಾಯ.

ಯಮ:(ಮನಸ್ಸಿನಲ್ಲಿ) ಯಮಲೋಕದ ಯಮನಿಯಮಗಳು ಕಾಯದೆ ಕಟ್ಟಳೆಗಳು ಇವನ ಸೊಂಕಿನಿಂದ ಸಡಿಲಾದಾವು. ಇವನ ಖಟ್ಲೆ ವಿಚಾರಣೆಯನ್ನು ನನ್ನ ಕೋಣೆಯ (ಚೆಂಬರನಲ್ಲಿ) ಏಕಾಂತ ವಾತಾವರಣದಲ್ಲಿ ನಡಿಸುವೆ. ಇವನನ್ನು ಎಳತರ್ರಿ. ಪ್ರೇಕ್ಷಕರಿಗೆ ಸುದ್ದಿಗಾರರಿಗೆ ಪ್ರವೇಶವಿಲ್ಲ.

## ಹಿಂದುಸ್ತಾನದಲ್ಲಿ ಜಾತೀಯ ತಿಕ್ಕಾಟ

(೧ ನೇ ಪುಟದಿಂದ)

ಕರೆಯುವದೂ ಇಷ್ಟವಲ್ಲ. ಅದುದರಿಂದ ಗೃಹರಕ್ಷಕ ದಲಗಳಂಥ ದಲಗಳನ್ನು ಪ್ರಾಂತಿಕ ಸರಕಾರಗಳ ಸಂಘಟಿಸುವದು ಅವಶ್ಯವೆನಿಸುತ್ತದೆ. ಎರಡನೆಯ ದರ್ಜೆಯ ಪೋಲೀಸ ಪಡೆಗಳಂತೆಯೆ ಈ ದಲಗಳನ್ನು ಸಂಘಟಿಸಬೇಕು. ಕೇವಲ ಅವಶ್ಯಕ ಪ್ರಸಂಗದಲ್ಲಿ ಮಾತ್ರ ಅವರನ್ನು ಕರೆಯತಕ್ಕದ್ದು- ಈ ದಲಗಳಿಗೆ ಕೊನೆಗೆ ಸೈನಿಕ ಶಿಕ್ಷಣ ಕೊಡುವದೂ ಅವಶ್ಯವೆನಿಸಬಹುದು. ಇದೊಂದು ರಾಷ್ಟ್ರೀಯ ಸೈನ್ಯವಾಗುಳಿಯಬಹುದು. ಅದರೆ ಸದ್ಯಕ್ಕೆ ಪೋಲೀಸರೆಂದು ಅವರನ್ನು ಸಂಘಟಿಸಿದರೆ ಸಾಕು.

ಪ್ರಾಣಹಾನಿಯಾದ ಪ್ರತಿಯೊಂದು ದೊಡ್ಡ ಪ್ರಮಾಣದ ಜಾತೀಯ ದೊಂಬಿಗಳ ಬಗ್ಗೆ ವಿಚಾರಣಾ ಮಂಡಲವನ್ನು ನಿಯಮಿಸಬೇಕು. ಯಾವ ಜಾತಿಯವರು ನಿಶ್ಚಿತವಾಗಿ ದಾಳಿಗಾರರೆಂದು ಎನಿಸುವದೊ ಅವರ ಮೇಲೆ ದಂಡವನ್ನು ಹೇರತಕ್ಕದ್ದು. ಅಲ್ಲದೆ ಕ್ರಮಬದ್ಧವಾಗಿ ಕೈಕೊಳ್ಳುವ ಬೇರೆ ಯಾವದಾದರೂ ಉಪಾಯಗಳನ್ನು ಯೋಜಿಸಬೇಕು. ದೊಂಬಿ ಪ್ರಾರಂಭವಾಗುವ ಮೊದಲು ಮತ್ತು ಹಿಂದುಗಡೆ ನಿವಾರಕ ಉಪಾಯಗಳನ್ನು ಯೋಜಿಸುವದಕ್ಕೆ ನಾನು ಹೆಚ್ಚು ಮಹತ್ವ ಕೊಡುತ್ತೇನೆ. ದೊಂಬಿ ಎದ್ದ ಸ್ಥಳಕ್ಕೆ ಕೂಡಲೆ ಸಹಾಯಕ ದಲಗಳನ್ನು ಕಳಿಸುವ ಯೋಜನೆಯನ್ನು ಪ್ರತಿಯೊಂದು ಪ್ರಾಂತದಲ್ಲಿಯ ಪೋಲೀಸ ಅಧಿಕಾರಿಗಳು ಮಾಡಲಿಕ್ಕೆ ಬೇಕು. ನಿರಾಶ್ರಿತರ ಶಿಬಿರಗಳನ್ನು ತೆರೆಯಲಿಕೆ ಬೇಕು. ನಿರಾಶ್ರಿತರನ್ನು ಬೇರೆ ಬೇರೆ ಕಡೆಗೆ ಹೋಗಗೊಡುವದೆಂದರೆ ಜಾತೀಯತೆಯ ಸುಂಕರೋಗವನ್ನು ಎಲ್ಲೆಡೆಗೆ ಹಬ್ಬಿಸಿದಂತೆ ಸೈ. ಜಾತೀಯ ದಂಗೆಗಳಲ್ಲಿ ಕೊಲ್ಲಲ್ಪಟ್ಟವರ ಬಗ್ಗೆ ಪರಿಹಾರ ಕೊಡುವದು ಪ್ರಾಂತಿಕ ಸರಕಾರಗಳ ಕರ್ತವ್ಯ. ಮನೆಯ ಯಜಮಾನನೆ ಕೊಲ್ಲಲ್ಪಟ್ಟದ್ದರೆ ಅವರ ಮನೆಯವರನ್ನು ಯುದ್ಧದಲ್ಲಿ ಕೊಲ್ಲಲ್ಪಟ್ಟ ಸೈನಿಕರ ಮನೆಯವರಂತೆ ತಿಳಿದುಕೊಂಡು ಅವರಿಗೆ ಪರಿಹಾರ ಕೊಡತಕ್ಕದ್ದು. ದಾಳಿಗ ಜಾತಿಯವರು ಈ ಪರಿಹಾರ ನಿಧಿಯಲ್ಲಿಯ ಕೆಲ ಅಂಶವನ್ನಾದರೂ ಕೊಟ್ಟರೆ ನ್ಯಾಯ ಮತ್ತು ದಯೆಯ ಸಮ್ಮಿಲನ ಮಾಡಿದಂತಾಗುವದು.

ಭಾವೀ ರಾಜಕೀಯ ಅಸ್ಥಿರ ಪರಿಸ್ಥಿತಿಯೆ ಸದ್ಯದ ತಿಕ್ಕಾಟಕ್ಕೆ ಮುಖ್ಯ ಕಾರಣವಾಗಿದೆ. ಈ ಅಸ್ಥಿರತೆ ಹೀಗೆಯೆ ಸಾಗುತ್ತ ನಡೆದರೆ ಪರಿಸ್ಥಿತಿ ಮತ್ತಷ್ಟು ಕೆಡುವ ಸಂಭವವಿದೆ. ಕಾಂಗ್ರೆಸ ಮತ್ತು ಮುಸ್ಲಿಂ ಲೀಗಿನವರಲ್ಲಿ ಒಡಂಬಡಿಕೆಯಾದರೆ ಜಾತಿ ಜಾತಿಗಳಲ್ಲಿ ಶಾಂತಿಯುಂಟಾಗುವಲ್ಲಿ ಸಂದೇಹವಿಲ್ಲ. ಅದು ಶಕ್ಯವಿಲ್ಲದಿದ್ದರೆ ಸದ್ಯದ ಅನಿಶ್ಚಿತ ಪರಿಸ್ಥಿತಿಗಿಂತ ಯಾವದಾದರೊಂದು ಬಗೆಯ ಒಡಂಬಡಿಕೆಯುಂಟಾದರೂ ಇಷ್ಟವೆ. ವೈಸರಾಯರ ಅಧ್ಯಕ್ಷತೆಯಲ್ಲಿ ಪರಸ್ಪರ ಸಹಕರಿಸಿದ ಎರಡು ಪ್ರಮುಖ ರಾಜಕೀಯ ಪಕ್ಷಗಳ ಪ್ರತಿನಿಧಿಗಳುಳ್ಳ ಸದ್ಯದ ನಡುಗಾಲ ಸರಕಾರ ಅಸ್ಥಿರವಾಗಿದ್ದು ಹಿಂದೀ ಜನಸಾಮಾನ್ಯರನ್ನು ಬಹಳ ದಿನಗಳ ವರೆಗೆ ನಿಯಂತ್ರಿಸಲು ಸಮರ್ಥವಾಗಲಾರದು. ದೇಶದ ಐಕ್ಯಕ್ಕೆ ಸಾಧಕವಾದ ಮತ್ತು ಜನತೆಯ ಅಭಿವೃದ್ಧಿಗೆ ಅವಶ್ಯವಾದ ಘಟನೆಯನ್ನು ಎಷ್ಟು ಬೇಗ ನಾವು ಕಾರ್ಯರೂಪದಲ್ಲಿ ತರಬಲ್ಲೆವೊ ಅಷ್ಟು ಬೇಗ ಪ್ರಗತಿ ಮತ್ತು ಅಭಿವೃದ್ಧಿ ಮಾತ್ರವೆ ಸಾಧ್ಯವಾಗಿರದೆ ದೇಶದ ಶಾಂತಿ ಮತ್ತು ಭದ್ರತೆಗಳೂ ಶಕ್ಯವಾಗುವುವು.

## ಸಂಸ್ಥಾನಗಳು

ಜಮ್ಮೂ ಪ್ರಾಂತಿಕ ಶಿಕ್ಷಕರ ಸಂಘದ ಕಾರ್ಯಕಾರೀ ಮಂಡಳದ ೨೧ ಸದಸ್ಯರು ಹೆಚ್ಚಿನ ವೇತನದ ವಿಷಯದ ತಮ್ಮ ಬೇಡಿಕೆಯನ್ನು ಕಾಶ್ಮೀರ ಸಂಸ್ಥಾನ ಸರಕಾರ ಮನ್ನಿಸದಿದ್ದುದಕ್ಕೆ ಪ್ರಾಣಾಂತಿಕ ಉಪವಾಸ ಕೈಕೊಳ್ಳಲು ನಿರ್ಧರಿಸಿದ್ದಾರೆ. ಡಿಸೆಂಬರ ೫ ರಿಂದ ಸಂಪು ಹೂಡಲು ಶಿಕ್ಷಕರ ಸಂಘ ನಿರ್ಧರಿಸಿದೆ.

ಕೋಚೀನ ಸರಕಾರದವರು ಸಂಸ್ಥಾನ ಪೂರ್ಣ ಮದ್ಯಪ್ರತಿಬಂಧವನ್ನು ಜಾರಿಯಲ್ಲಿ ತರಲಿರುವರೆಂದು ಅಧಿಕೃತವಾಗಿ ತಿಳಿಯುತ್ತದೆ. ಇದರಿಂದ ಸರಕಾರದ ಉತ್ಪನ್ನದಲ್ಲಿ ೬೦ ಲಕ್ಷ ರೂಪಾಯಿ ಹಾನಿಯಾಗುತ್ತದೆ. ಈ ಕೊರತೆಯನ್ನು ತುಂಬಿಕೊಳ್ಳುವ ಉಪಾಯ ಸೂಚಿಸಲು ಸರಕಾರದವರು ೧೨ ಜನರ ಸಮಿತಿಯೊಂದನ್ನು ನೇಮಿಸಿರುವರು.

ವಿನಾಶಕ ಚಟುವಟಿಕೆಗಳನ್ನು ಸಾಗಿಸಿದ ಆರೋಪದಿಂದ ಕಾಶ್ಮೀರ ರಾಷ್ಟ್ರೀಯ ಪರಿಷತ್ತಿನ ಉಪಾಧ್ಯಕ್ಷ ಅಬ್ದುಲ್ ಮಜೀದ ಬಕ್ಷೀ, ಗುಲಾಮ ರಸೂಲ ಮೊದಲಾದ ೬ ಜನರ ಬಂಧನವಾಗಿದೆ. ಈ ಬಂಧನಗಳ ನಿಮಿತ್ತ ಶಾಸನ ಸಭೆ ಚುನಾವಣೆಗಳನ್ನು ಬಹಿಷ್ಕರಿಸುವ ವಿಚಾರ ನಡೆದಿದೆ.







ಕರ್ಮವೀರ
ಹರಿಜನ ಪುರವಣಿ

## ಶ್ರದ್ಧೆಗೆ ಆಹ್ವಾನ

ಅಮೇರಿಕೆಯ ಅಸೋಸಿಯೇಟೆಡ್ ಪ್ರೆಸ್ಸಿನ ಪ್ರತಿನಿಧಿ ಕೇಳಿದ ಕೆಳಗಿನ ಪ್ರಶ್ನೆಗಳಿಗೆ ಗಾಂಧಿಜಿಯವರು ಈ ರೀತಿ ಉತ್ತರ ಕೊಟ್ಟರು.

೬—೧೧—೪೬ ಪ್ಯಾರೇಲಾಲ

ಪ್ರಶ್ನೆ- ೧೯೪೨ ರಲ್ಲಿಯ ಅಶಾಂತಿ, ಹಿಂದ ರಾಷ್ಟ್ರಸೇನೆಯ ಚಳವಳಿ ಮತ್ತು ಅಶಾಂತಿ ನಾವಿಕರ ಬಂಡಾಯ, ಕಲಕತ್ತೆ, ಮುಂಬಯಿಗಳಲ್ಲಿಯ ದೊಂಬಿ, ಕಾಶ್ಮೀರದಂಥ ಹಿಂದೀ ಸಂಸ್ಥಾನಗಳಲ್ಲಿಯ ಚಳವಳಿಗಳು ಮತ್ತು ಇತ್ತೀಚೆಗಿನ ಜಾತೀಯ ದೊಂಬಿಗಳು ಹಿಂದುಸ್ತಾನದಲ್ಲಿ ಸದ್ಯದಲ್ಲಿ ನಡೆದ ಇವೆಲ್ಲ ಘಟನೆಗಳನ್ನು ನೋಡಿದರೆ ನಿಮ್ಮ ಅಹಿಂಸಾಧ್ಯೇಯ ಅಯಶಸ್ವಿಯಾಯಿತೆಂದು ಹೇಳಬೇಕೊ, ಏಕೆಂದರೆ ಹಿಂದೀಯರಲ್ಲಿ ಅಹಿಂಸೆ ಆಳವಾಗಿ ಬೇರೂರಿಲ್ಲೆಂಬುದು ಇವೆಲ್ಲವುಗಳಿಂದ ಸಿದ್ಧವಾಗುತ್ತದೆ.

ಉತ್ತರ-ಇದೊಳ್ಳೆ ಘಾತಕ ಸಾಮಾನ್ಯ ನಿರೂಪಣೆ—ನೀವು ಉಲ್ಲೇಖಿಸಿದ್ದೆಲ್ಲ ಹಿಂಸೆಯೆಂದು ನಿಜವಾಗಿ ಹೇಳಬಹುದಾದರೂ ಅದರಿಂದ ಅಹಿಂಸಾಧ್ಯೇಯ ಅಯಶಸ್ವಿಯಾಯಿತೆಂದು ಅರ್ಥವಾಗಲಾರದು. ಬಹಳವಾದರೆ ಜನಸಾಮಾನ್ಯರ ಮನಸ್ಸನ್ನು ಪರಿವರ್ತಿಸಲು ಅವಶ್ಯವಾದ ತಂತ್ರವು ನನಗಿನ್ನೂ ಗೊತ್ತಾಗಿಲ್ಲೆಂದು ಹೇಳಬಹುದು. ಆದರೆ ಹಿಂದುಸ್ತಾನದಲ್ಲಿಯ ಏಳು ಲಕ್ಷ ಹಳ್ಳಿಗಳಲ್ಲಿಯ ಕೋಟ್ಯವಧಿ ಜನರು ನೀವು ಉಲ್ಲೇಖಿಸಿದ ಹಿಂಸಾಕೃತ್ಯಗಳಲ್ಲಿ ಭಾಗ ವಹಿಸಿಲ್ಲೆಂದು ನಾನು ಹೇಳಬಯಸುತ್ತೇನೆ. ಅಹಿಂಸೆಯು ಹಿಂದೀಯರ ಮನಸಿನಲ್ಲಿ ಆಳವಾಗಿ ಬೇರೂರಿದೆಯೊ ಹೇಗೆಂಬ ಪ್ರಶ್ನೆಗೆ ನನ್ನ ಮರಣದ ನಂತರವೆ ಉತ್ತರ ದೊರೆಯಬಲ್ಲದು.

ಪ್ರಶ್ನೆ— ೨. ಶೂರರ ಅಹಿಂಸೆಯನ್ನು ಪಡೆಯುವದಕ್ಕೆ ಪ್ರತಿಯೊಬ್ಬ ತನ್ನ ದೈನಿಕ ಜೀವನದಲ್ಲಿ ಮಾಡಬೇಕಾದ ಕನಿಷ್ಠ ಕಾರ್ಯಕ್ರಮವೇನು?

ಉತ್ತರ— ಶೂರರ ಅಹಿಂಸೆಯನ್ನು ಸಂಪಾದಿಸಬಯಸುವವನು ಮೊದಲು ತನ್ನ ಮನಸ್ಸಿನಲ್ಲಿರುವ ಹೇಡಿತನವನ್ನು ಹೊಡೆದು ಹಾಕಬೇಕು. ಮತ್ತು ಅದರ ದಿವ್ಯ ಜ್ಯೋತಿಯಲ್ಲಿ ತನ್ನ ಸಣ್ಣ ದೊಡ್ಡ ಪ್ರತಿಯೊಂದು ಕಾರ್ಯಕಲಾಪವನ್ನು ಸಾಗಿಸಬೇಕು. ಈ ರೀತಿಯಾಗಿ ಅವನು ರೊಚ್ಚಿಗೇಳದೆ ತನ್ನ ಮೇಲಿನವರನ್ನು ಕಂಡು ಭಯಭೀತನಾಗಲು ನಿರಾಕರಿಸಬೇಕು. ಅದೇ ಕಾಲಕ್ಕೆ ಅವನು ತನ್ನ ಸ್ಥಳಕ್ಕೆ ಶರಣು ಹೊಡೆಯಲು ಸಿದ್ಧನಿರಲಿಕ್ಕೆ ಬೇಕು. ಎಷ್ಟೇ ಲಾಭಕರ ಉದ್ಯೋಗವಾಗಿದ್ದರೂ ಅದನ್ನು ಲಕ್ಷಿಸಬಾರದು, ಈರೀತಿಯಾಗಿ ತನ್ನ ಸರ್ವಸ್ವವನ್ನು ತ್ಯಾಗ ಮಾಡುವ ಮನುಷ್ಯನು ತನ್ನ ಒಡೆಯನ ವಿರುದ್ಧ, ಕಿಂಚಿತ್ತಾದರೂ ಕೋಪಭಾವನೆಯನ್ನು ತಳೆಯಬಾರದು. ಇಂಥವರಲ್ಲಿ ಶೂರರ ಅಹಿಂಸೆ ಬೇರೂರಿದೆಂದು ಹೇಳಬಹುದು. ಪ್ರವಾಸಿಕನೊಬ್ಬನು ನನ್ನ ಮಗನ ಮೇಲೆ ಅಭಿಯೋಗ ಮಾಡುವ ಬೆದರಿಕೆ ಹಾಕುವನೆಂದು ತಿಳಿಯಿರಿ, ಆ ಭಾವೀ ಕೊಲೆಗಡಕನೊಡನೆ ನಾನು ವಾದಿಸಿದನೆಂದೂ ತಿಳಿಯಿರಿ. ಅಗ ಸ್ವಾಭಾವಿಕವಾಗಿ ಅವನು ನನ್ನ ಮೇಲೆ ಏರಿ ಬರುವನು. ಅವನ ಬಗ್ಗೆ ಯಾವದೇ ಬಗೆಯ ವೈರಭಾವನೆಯನ್ನು ತಾಳದೆ ನಾನು ಅವನ ಹೊಡೆತವನ್ನು ಗೌರವ ಮತ್ತು ದೊಡ್ಡಸ್ತಿಕೆಯಿಂದ ಸಹಿಸಿದ್ದಾದರೆ ಶೂರರ ಅಹಿಂಸೆಯನ್ನು ನಾನು ಪ್ರದರ್ಶಿಸಿದಂತಾಗುವದು. ಇಂಥ ಉದಾಹರಣೆಗಳು ಪ್ರತಿದಿನ ಸಂಭವಿಸುವವು. ಮತ್ತು ಸಹಜವಾಗಿ ಹೆಚ್ಚುತ್ತ ಹೋಗುವವು. ಪ್ರತಿಸಲ ನಾನು ನನ್ನ ಕಿಚ್ಚನ್ನು ಶಮನಗೊಳಿಸುತ್ತ ಹೋದರೆ ತಿರುಗಿ ಹೊಡೆತ ಕೊಡುವ ಶಕ್ತಿ ನನ್ನಲ್ಲಿದ್ದರೂ ನಾನು ಹಾಗೆ ಮಾಡದಿದ್ದರೆ ನನ್ನಲ್ಲಿ ಶೂರರ ಅಹಿಂಸೆ ಅಭಿವೃದ್ಧಿಗೊಳ್ಳುವುದು. ಆ ಅಹಿಂಸೆ ನನ್ನನ್ನು ಎಂದೂ ಪರಾಜಯಗೊಳಿಸದು. ನನ್ನ ಕಡುಹಗೆಯು ಕೂಡ ಅದಕ್ಕೆ ತಲೆವಾಗಲಿಕ್ಕೆ ಬೇಕಾಗುವುದು.

## ಆಹಾರ, ಉರುವಲ, ಎಣ್ಣೆ

ಆಹಾರ, ಎಣ್ಣೆ ಮತ್ತು ಉರುವಲ ಈ ಮೂರು ವಸ್ತುಗಳು ಹಳ್ಳಿಗಳಲ್ಲಿ ಜೀವನದ ಮುಖ್ಯಾಧಾರಗಳು. ಈ ಮೂರು ಪದಾರ್ಥಗಳ ಕೊರತೆಯೀಗ ಎಲ್ಲೆಡೆ ಇರುವದು. ಇವುಗಳ ಕೊರತೆಯನ್ನು ಹೋಗಲಾಡಿಸಲು ಗೆಳೆಯನೊಬ್ಬನು ಕೆಳಗಿನ ಸೂಚನೆಗಳನ್ನು ಕಳಿಸಿದ್ದಾನೆ. ಈ ಸೂಚನೆಗಳು ಮುಖ್ಯವಾಗಿ ಪಂಜಾಬಕ್ಕೆ ಅನ್ವಯಿಸಬಹುದಾದರೂ ಹಿಂದುಸ್ತಾನದಲ್ಲಿ ಈ ಬಗೆಯ ಪರಿಸ್ಥಿತಿಯಿರುವ ಕಡೆಗೆಲ್ಲ ಇವು ಅನ್ವಯಿಸುವವು.

೧) ನದಿ ಮತ್ತು ಹಳ್ಳಗಳ ಬದಿಯಲ್ಲಿ ಈಗ ಬೇಕಾದಷ್ಟು ಭೂಮಿಯಲ್ಲಿ ಕೇವಲ ಕಸಕಡ್ಡಿ ಮಾತ್ರ ಬೆಳೆಯುತ್ತದೆ. ಸೈನಿಕರ ಸಹಾಯದಿಂದ ಅದನ್ನೆಲ್ಲ ಸ್ವಚ್ಛಮಾಡಿದರೆ ಗೋದಿ, ಜವೆಗೋದಿ, ಕಡಲೆ, ಹೆಸರು ಮೊದಲಾದವುಗಳನ್ನು ಬೆಳೆಯಲು ಬರುವದು. ಈ ಕುರಣ ಭೂಮಿ ಬಹಳ ಫಲವತ್ತಾಗಿರುವುದರಿಂದ ವಿಫುಲ ಬೆಳೆ ಬರುವುದಲ್ಲದೆ ದನಕರುಗಳಿಗೂ ಹುಲ್ಲು ಸಾಕಷ್ಟಾಗುವುದು.

೨) ರೇಲ್ವೆ ಹಳಿಗುಂಟ ಮತ್ತು ಹೆದ್ದಾರಿಗಳಗುಂಟ ಈಗ ಬೇಕಾದಷ್ಟು ಪಡಭೂಮಿ ಬಿದ್ದಿದೆ. ಸೈನ್ಯಖಾತೆಯವರು ತಾವೇ ಈ ಪಡಭೂಮಿಗಳನ್ನು ಸಾಗುಮಾಡಿದರೂ ಚಿಂತೆಯಿಲ್ಲ; ಇಲ್ಲದಿದ್ದರೆ ಅವನ್ನು ಸಾಗುಮಾಡಲು ಬೇಕಾದ ಯಂತ್ರೋಪಕರಣಗಳನ್ನೆಲ್ಲ ಒದಗಿಸಿ ಕೊಟ್ಟು ಈ ಭೂಮಿಗಳೆಲ್ಲ ಸಾಗಾಗುವಂತೆ ನೋಡಿಕೊಳ್ಳಬೇಕು.

೩) ಪಂಜಾಬದಲ್ಲಿ ಕಸಕಡ್ಡಿಯಿಂದ ಕೂಡಿದ ಪಡಭೂಮಿ ವಿಪುಲವಾಗಿದೆ. ಸ್ವಲ್ಪ ಪರಿಶ್ರಮದಿಂದ ಇದನ್ನೆಲ್ಲ ಸ್ವಚ್ಛಮಾಡಿ ಅಲ್ಲಿ ಔಡಲ ಬೆಳೆಯಬಹುದು. ಅದು ಬಹಳ ಬಿರುಸಾದ ಗಿಡವಾಗಿದ್ದು ಹವೆಯಲ್ಲಿಯ ತಂಪನ್ನೆಲ್ಲ ಹೀರಿಕೊಂಡು ಬೆಳೆಯಬಲ್ಲದು. ಔಡಲೆಣ್ಣೆ ಸಾಬೂನಕ್ಕೆ ಅತ್ಯುಪಯುಕ್ತವಾಗಿದೆ. ಇದರಿಂದ ಈಗ ಸಾಬೂನಿಗಾಗಿ ಉಪಯೋಗಿಸಲಾಗುತಿರುವ ಎಳ್ಳೆಣ್ಣೆ, ಶೆಂಗಾದೆಣ್ಣೆ, ಸಾಸವೆ ಎಣ್ಣೆ ಮೊದಲಾದವೆಲ್ಲ ಜನರ ಉಪಯೋಗಕ್ಕಾಗಿ ಉಳಿಯುವುವು.

೪) ಉರುವಲದ ಅಭಾವದಿಂದ ಕುಳ್ಳು ಮತ್ತು ಉಳಿದ ಗೊಬ್ಬರ ಪದಾರ್ಥಗಳನ್ನು ಹಳ್ಳಿಗಳಲ್ಲಿ ಉರುವಲೆಂದು ಉಪಯೋಗಿಸಲಾಗುತ್ತದೆ. ಇದರಿಂದ ಭೂಮಿ ದಿನದಿನಕ್ಕೆ ಬಡಕಾಗುತ್ತ ನಡೆಯುತ್ತದೆ. ಅದುದರಿಂದ ಲೈನದಾರಿಗುಂಟ ಗಿಡಗಳನ್ನು ಸಾಲಾಗಿ ಹಚ್ಚಬೇಕು. ಇದರಿಂದ ಉರುವಲ ಸಿಕ್ಕುವುದಲ್ಲದೆ ಕಟ್ಟಡಗಳಿಗೆ ಕಟ್ಟಿಗೆಯೂ ಸಿಕ್ಕುವುದು.

ಕಾಲುವೆಗಳಿಗೆಲ್ಲ ಇಟ್ಟಂಗಿ ಮತ್ತು ಸಿಮೆಂಟ ಒಡ್ಡುಗಳನ್ನು ಹಾಕುವುದರಿಂದ ಈಗ ಭೂಮಿಗಳಿಗೆ ಹೆಚ್ಚು ನೀರು ಹೋಗಿ ಅವು ಜವಳಾಗುತಿರುವುದೆಲ್ಲ ನಿಂತು ಹೋಗುವುದು. ಈ ಸಾವಿರಾರು ಎಕರೆ ಭೂಮಿಗಳನ್ನು ಫಲವತ್ತಾಗಿ ಮಾಡಬಹುದು. ಭೂಮಿಗಳನ್ನು ತುಂಡು ಮಾಡುವದನ್ನೂ ನಿಲ್ಲಿಸಬೇಕು. ಇದರಿಂದ ಅನೇಕ ಕಡೆಗಳಲ್ಲಿ ಒಕ್ಕಲತನಕ್ಕೆ ಬಹಳ ಅಡ್ಡಿಯಾಗಿದೆ. ಇಂಥ ತುಂಡು ಭೂಮಿಗಳನ್ನೆಲ್ಲ ಒಟ್ಟುಗೂಡಿಸಿ ಅವನ್ನು ಅರ್ಥಿಕ ದೃಷ್ಟಿಯಿಂದ ಫಲಪ್ರದವಾಗುವಂತೆ ಮಾಡಬೇಕು. ಯಾಂತ್ರಿಕ ಸಹಾಯದಿಂದ ನೀರಾವರಿಯ ಯೋಜನೆಯನ್ನೂ ಮಾಡಬೇಕು. ಇವೇ ಮೊದಲಾದ ಸೂಚನೆಗಳನ್ನು ಈ ಗೆಳೆಯನು ಮಾಡಿದ್ದಾನೆ.

ಸೋದೇಪುರ ಪ್ಯಾರೇಲಾಲ
೩೦—೧೦—೪೬

## ಒಡಿಸಾದ ಸಾವರಾ ಜನರು

ಮೊದಲು ಜೋಧಪುರದ ನಿವಾಸಿಗಳಾದ ಸ್ವಾಮಿ ಭೈರವಾನಂದರು ಕಟಕ ಜಿಲ್ಹೆಯ ಪರ್ವತಸೀಮೆಯಲ್ಲಿ ಚಂಡೀದೇವಿಯ ಕಂದರದಲ್ಲಿ ಸಾವರಾ ಎಂಬ ಮೂಲ ನಿವಾಸಿ ಜನರ ಸಂಗಡ ನೆಲೆಯೂರಿದ್ದಾರೆ. ಅವರಿರುವ ಸ್ಥಳದ ಹೆಸರು ಚಂಡೀಖೋಲ. ಈ ಅರಣ್ಯಪ್ರದೇಶದಲ್ಲಿ ಅವರು ಚಂಡೀ ದೇವಿಗೊಂದು ಮಂದಿರವನ್ನು ಕಟ್ಟಿಸಿ ಅಲ್ಲಿ ನಿತ್ಯ ಬೆಳಗು-ಬೈಗು ಭಜನ—ಪೂಜನಗಳನ್ನು ನಡೆಸುತ್ತಾರೆ. ಅವರ ಪ್ರಯತ್ನದಿಂದ ಮಾರವಾಡಿ ಗೆಳೆಯರೊಬ್ಬರು ಒಂದು ಧರ್ಮಶಾಲೆಯನ್ನೂ ಮಹಾದೇವ ಮಂದಿರವನ್ನೂ ಸ್ಥಾಪಿಸಿದ್ದಾರೆ. ಪರ್ವತ ಝರಿಯೊಂದರಿಂದ ಮೂರಿಂಚಿನ ನಲ್ಲಿಯ ಮೂಲಕ ಸ್ವಚ್ಛ ಜಲವನ್ನು ತಂದು ಸಮೀಪದಲ್ಲಿಯೇ ಕಟ್ಟಿದ ಕೆರೆಯಲ್ಲಿ ಶೇಖರಿಸಲಾಗಿದೆ. ಗೋಮುಖದೊಳಗಿಂದ ಹರಿದು ಬರುವಂತೆ ಮಾಡಿದ ಈ ನಿರ್ಮಲವಾದ ನೀರಲ್ಲಿ ಮೈತೊಳೆದುಕೊಳ್ಳುವದೇ ಒಂದು ಸಂಜೀವನ.

ಮೂರುವರ್ಷ ಕೆಳಗೆ ಸಾವರಾ ಮಕ್ಕಳಿಗಾಗಿ ಒಂದು ಚಿಕ್ಕ ಸಾಲೆಯನ್ನು ತೆಗೆಯುವದಾಯಿತು. ಬ್ರಹ್ಮಚಾರೀ ಭೈರವಾನಂದರನ್ನು ಅದಕ್ಕೆ ನೇಮಿಸಲಾಯಿತು. ಮೂರೇ ವರ್ಷಗಳ ಅಲ್ಪಾವಧಿಯಲ್ಲಿ ಇಷ್ಟು ಪ್ರಗತಿ ಸಾಧ್ಯವುಂಟೆಂದು ನಾನು ನಂಬುತಿದ್ದಿಲ್ಲ. ಆದರೆ ಕಣ್ಣಾರೆ ಕಂಡ ನಂತರ ನನಗೆ ಮನವರಿಕೆಯಾಗಿದೆ.

ರಾಮಾಯಣದ ಪರಿಚಯವುಳ್ಳವರಿಗೆ ಶಬರಿಯ ಕಥೆ ಗೊತ್ತು. ಶ್ರೀ ರಾಮಚಂದ್ರನಿಗೆ ಸರಿಯಾದ ಹಣ್ಣುಗಳನ್ನೇ ಅರ್ಪಿಸಬೇಕೆಂಬ ಆತುರದಲ್ಲಿ ಆಕೆ ಅವುಗಳನ್ನು ಕಚ್ಚಿ ರುಚಿನೋಡಿ ಕೊಟ್ಟಳಂತೆ. ಅಷ್ಟು ಸರಳವಾಗಿತ್ತು ಅವಳ ಹೃದಯ. ಕಟಕದ ಸಾವರಾ ಜನರೂ ಅವಳಂತೆ ಸರಳಜನರು. ಅವರು ನಿಜವಾಗಿ ಗಿಡ ಕಡಿದು ಬದುಕುವ ಜನ. ಅವರ ಹೆಣ್ಣುಮಕ್ಕಳು ಕೊಡಲಿ ಹಿಡಿದು ಅಡವಿಗೆ ಹೋಗಿ ಉರುವಲ ಕಟ್ಟಿಗೆಯನ್ನು ಹೊತ್ತು ಸುತ್ತುಮುತ್ತಲ ಹಳ್ಳಿಗಳಲ್ಲಿ ಅಲೆಯುವರು. ಅದನ್ನು ಮಾರಿ ಅವರಿಗೆ ನಾಲ್ಕೊ, ಆರೊ ಆಣೆ ದೊರೆತರೆ ಬಹಳ. ಅದೇ ಅವರ ದಿನದ ಗಳಿಕೆ. ಅವರ ಮಕ್ಕಳು, ನಗರವಾಸಿಗಳ ಕಲ್ಪನೆಗೇ ನಿಲುಕಲಾರದಂಥ ಎಲ್ಲಬಗೆಯ ಕೆಲಸ ಬೊಗಸೆಗಳನ್ನೂ ಮಾಡುವರು. ಅದರಿಂದ ಹೆತ್ತವರು ತಮ್ಮ ಮಕ್ಕಳನ್ನು ಸಾಲೆಗೆ ಕಳಿಸುವರೆ ಅವರ ಪಥ ಸಾಗದು. ಆದರೆ ಸಂಕಟಕಾಲದಲ್ಲಿ ಸೇವೆ ಮಾಡಿ, ಅಪರೂಪಕ್ಕೊಮ್ಮೆ ತಮ್ಮ ಶ್ರೀಮಂತ ಗೆಳೆಯರಿಂದ ಈ ಅರ್ಧಪೋಷಿತ ಮಾನವ ರಾಶಿಗೆ ಸವಿಯೂಟ ಕೊಡಿಸಿ ಸ್ವಾಮಿ ಭೈರವಾನಂದರು ಅವರಲ್ಲಿ ಎಷ್ಟು ಜನಪ್ರಿಯರಾಗಿರುವರೆಂದರೆ ತಮ್ಮ ಸಾಲೆಗೆ ಅವರ ಮಕ್ಕಳನ್ನು ಸೆಳೆದುಕೊಳ್ಳುವದು ಅವರಿಗೆ ಸಾಧ್ಯವಾಗಿದೆ. ಮಕ್ಕಳಿಗೂ ಅವರು ಮಧ್ಯಾಹ್ನಕ್ಕೆ ಚುರಮುರಿಯನ್ನೂ ವರ್ಷಕ್ಕೆ ಎರಡುಬಾರಿ ಅರಿವೆ ಅಂಚಡಿಯನ್ನೂ ಪುಕ್ಕಟೆ ಹಂಚುವರು. ಮೂರು ವರ್ಷಗಳ ಹಿಂದೆ ೩೦ ವಿದ್ಯಾರ್ಥಿಗಳಿದ್ದ ಸಾಲೆಯಲ್ಲಿ ಇಂದು ೧೦೦ ವಿದ್ಯಾರ್ಥಿಗಳು ಕಲಿಯುತಿರುವರು. ಒಬ್ಬರೇ ಗುರುಗಳಿದ್ದ ಸಂಸ್ಥೆಯಿಂದು ಗುರುತ್ರಯದ ಶಾಲೆಯಾಗಿ ಬೆಳೆದಿದೆ. ಶಾಲೆಗೂ ಅಧ್ಯಾಪಕರಿಗೂ ಒಳ್ಳೆಯ ಕಟ್ಟಡಗಳಿವೆ.

ಸಾವರಾ ಹುಡುಗರಿಗೋಸ್ಕರ ಪ್ರಾರಂಭಿಸಿದ ಉಚಿತ ವಸತಿಗೃಹವನ್ನು ಮಾತ್ರ ಮುಚ್ಚಿಬಿಡಬೇಕಾಯಿತು. ಹೆತ್ತವರಿಗೆ ಇಪ್ಪತ್ತನಾಲ್ಕು ತಾಸು ತಮ್ಮ ಮಕ್ಕಳನ್ನು ಬಿಡಲು ಸಾಧ್ಯವಾಗದ್ದರಿಂದ. "ಹತ್ತು ಹನ್ನೆರಡು ವಯಸ್ಸಿನ ಹುಡುಗರನ್ನು ನಾವು ರೈತರಲ್ಲಿ ಆಳುಗಳನ್ನಾಗಿ ಇಟ್ಟರೆ ಅವರಿಗೆ ಅನ್ನವಸ್ತ್ರಮಾತ್ರ ಪುಕ್ಕಟೆ ದೊರೆಯುವದಲ್ಲದೆ ಮೇಲೆ ತಿಂಗಳಿಗೆ ಎರಡರಿಂದ ಐದು ರೂಪಾಯಿಯವರೆಗೆ ಕೂಲಿಯೂ ಸಿಗುತ್ತದೆ. ನೀವು ನಮ್ಮ ಮಕ್ಕಳನ್ನು ನಿಮ್ಮ ವಸತಿಗೃಹದಲ್ಲಿರಿಸಿಕೊಳ್ಳುವವಾದರೆ ಪುಕ್ಕಟೆ ಅನ್ನವಲ್ಲದೆ ಅದಕ್ಕಿಂತ ಹೆಚ್ಚೇನನ್ನಾದರೂ ಕೊಡಬೇಕಾಗುವದು." ಬಡ ಸಾವರಾ ಜನರ ದೃಷ್ಟಿಯಲ್ಲಿ ಈ ಮಾತು ಬಹಳ ನ್ಯಾಯವಾದುದೇ ಸರಿ. ೧೯೧೧ ರಲ್ಲಿ ಶ್ರೀ ಗೋಖಲೆಯವರು ಒತ್ತಾಯದ ಪುಕ್ಕಟೆ ಶಿಕ್ಷಣದ ಮಸೂದೆಯನ್ನು ತಯಾರಿಸಿದಾಗ ದರ್ಭಾಂಗದ ಮಹಾರಾಜರು ಅದರ ವಿರುದ್ಧ ಮಂಡಿಸಿದ ವಾದವನ್ನು ಅವರು ನನ್ನ ನೆನಪಿಗೆ ತಂದುಕೊಟ್ಟರು. ರೈತರು ಬರಿ ನಾಲ್ಕೈದು ವರ್ಷಗಳ ಮಟ್ಟಿಗೆ ಕೂಡ ತಮ್ಮ ಮಕ್ಕಳನ್ನು ಶಿಕ್ಷಣಕ್ಕಾಗಿ ಬಿಟ್ಟುಕೊಡಲು ಸರ್ವಥಾ ಸಮರ್ಥರಲ್ಲವೆಂದು ಅವರು ಹೇಳಿದ್ದರು. ಸಾವರಾ ಜನರಿಗೆ ಒಂದಂಗಲು ಹೊಲವಿಲ್ಲ. ಅವರ ಜೀವನ ವರ್ಷಾದ್ಯಂತವೂ ಕಟ್ಟಿಗೆ ಕಡಿದು, ಹುಲ್ಲುಕೊಯ್ದು ನಡೆಯಬೇಕಾಗಿದೆ. ಅಂಥವರಿಗಿನ್ನು ಮಕ್ಕಳನ್ನು ಸಾಲೆಗೆ ಕಳಿಸುವದು ಎಷ್ಟು ಕಠಿಣವಾಗಿಬೇಕೆಂದು ಊಹಿಸುವದು ಕಷ್ಟವಲ್ಲ.

ನಿಜವಾಗಿ ನೋಡಿದರೆ, ಹಿಂದುಸ್ತಾನದ ಎರಡೂವರೆ ಕೋಟಿ ಮೂಲ ನಿವಾಸಿಗಳ ಲಕ್ಷಾಂತರ ಮಕ್ಕಳನ್ನು ಉಪಯುಕ್ತ ನಾಗರಿಕರನ್ನಾಗಿ ಮಾಡಬೇಕಾದರೆ ಸಾವಿರಾರು ಜನರ ಉತ್ಕಟ ಸೇವೆ ಅವಶ್ಯವಿದೆ. ಕೆಲ ಕಾಂಗ್ರೆಸ ಪ್ರಾಂತಿಕ ಸರಕಾರಗಳು ಮೂಲ ನಿವಾಸಿಗಳಿಗಾಗಿ ಒಂದು ವಿಶೇಷ ಖಾತೆಯನ್ನೇ ಪ್ರಾರಂಭಿಸಿವೆ. ಈ ಹಿಂದುಳಿದ ಜನರ, ಅದರಲ್ಲಿಯೂ ದುರ್ಗಮ ಗಿರಿ ಕಾನನಗಳಲ್ಲಿ ವಾಸಮಾಡುವ ಜನಾಂಗಗಳ ಶೈಕ್ಷಣಿಕ ಹಾಗು ಐಹಿಕ ಅಭಿವೃದ್ಧಿಗೋಸ್ಕರ ವರ್ಷವರ್ಷವೂ ಲಕ್ಷಾಂತರ ರೂಪಾಯಿಗಳನ್ನು ವೆಚ್ಚ ಮಾಡುವದು ನಿರಂತರವಾದ ಯೋಜನೆಯಾಗಬೇಕು ಹೊರತು ಆಗೊಮ್ಮೆ ಈಗೊಮ್ಮೆ ಮಾಡತಕ್ಕದ್ದಲ್ಲ. ಎರಡೂವರೆ ಕೋಟಿ ಮೂಲ ನಿವಾಸಿಗಳಲ್ಲಿ ಎರಡು ಕೋಟಿ ಜನರು ಪೀಠಭೂಮಿ ಸಮಭೂಮಿಗಳಲ್ಲಿಯೂ ಉಳಿದ ಅರ್ಧ ಕೋಟಿ ದುರ್ಗಮ ಗುಡ್ಡ ಕಾಡುಗಳಲ್ಲಿಯೂ ನೆಲೆಸಿದ್ದಾರೆ. ಅವರಿಗೆ ಸ್ನೇಹ ಸಹಾಯ ಅವಶ್ಯವಿದೆ.

—ಅಮೃತಲಾಲ ಠಕ್ಕರ

ಇದರಿಂದ ಹೊರಡುವ ನೀತಿಯಿದ್ದು ಮೂಲ ಶಿಕ್ಷಣವೇ ಅಂದರೆ ಕೈಗಾರಿಕೆಯ ಮೂಲಕ ಶಿಕ್ಷಣವೇ ಹಿಂದುಸ್ತಾನಕ್ಕೆ ಬೇಕಾದ ಶಿಕ್ಷಣ.

ಹೊಸದಿಲ್ಲಿ, ಮೋ. ಕ. ಗಾಂಧಿ
೨೫-೧೧-೪೬

# ರಾಟಿ ಮತ್ತು ಅಣುಬಾಂಬು

ಕನು ಗಾಂಧಿಯಿಂದ ನೂಲು ತೆಗೆಯುವದನ್ನು ಕಲಿತುಕೊಂಡ "ನ್ಯೂಯಾರ್ಕ ಪೋಸ್ಟ" ಪತ್ರಿಕೆಯ ಶ್ರೀ ಆಂಡ್ರ್ಯೂಫ್ರೀಮನ್ನರು ವಾಯುವ್ಯ ಗಡಿನಾಡಿನಲ್ಲಿ ಜವಾಹರಲಾಲರೊಡನೆ ಸಂಚರಿಸಿ ಬರುವ ತಮ್ಮ ಕರ್ತವ್ಯವನ್ನು ಮುಗಿಸಿದ ನಂತರ ರಾಟಿಯ ಪ್ರಶ್ನೆಯನ್ನೇ ಒಂದು ಭೆಟ್ಟಿಯಲ್ಲಿ ಗಾಂಧೀಜಿಯ ಮುಂದೆ ಎತ್ತಿದರು. ರಾಟಿಯಲ್ಲೊಂದು ಸಾಂಸ್ಕೃತಿಕ ಹಾಗು ರೋಗನಿವಾರಕ ಗುಣವಿದೆ; ಆದರಲ್ಲಿಯೂ ಅಣುಬಾಂಬಿನಲ್ಲಿ ಪರ್ಯವಸಾನಗೊಂಡ ಆದೊಂದು ಅಸ್ವಸ್ಥತೆಯಿಂದ ಕೊರಗುತ್ತಿರುವ ಪಶ್ಚಿಮ ದೇಶಕ್ಕೆ ಅದರಿಂದ ವಿಶೇಷ ಗುಣವಿದೆಯೆಂಬ ಅಭಿಪ್ರಾಯವನ್ನಿಟ್ಟುಕೊಂಡು ಫ್ರೀಮನ್ನರು ಬಂದಿದ್ದರು.

"ಅಮೇರಿಕೆಗೆ ರಾಟಿ ಏನಾದರೂ ಉಪದೇಶಾಮೃತ ಕೊಡಬಲ್ಲದೆ? ಅಣುಬಾಂಬಿಗೆ ಪ್ರತಿಯಾದ ಆಯುಧವಾಗಿ ಅದು ನೆರವಾದೀತೆ?"

"ಅಮೇರಿಕೆಗಷ್ಟೇ ಏಕೆ ರಾಟಿ ಇಡಿ ಜಗತ್ತಿಗೇ ದಾರಿ ತೋರಬಲ್ಲದೆಂದು ನನಗೆ ಅನಿಸುತ್ತದೆ" ಎಂದು ಗಾಂಧೀಜಿ ಉತ್ತರಿಸಿದರು. "ಆದರೆ ರಾಟಿಯನ್ನು ತನ್ನದನ್ನಾಗಿ ಮಾಡಿಕೊಂಡಿದ್ದೇನೆಂದು ಹಿಂದುಸ್ಥಾನ ತೋರಿಸಿಕೊಡುವ ವರೆಗೆ ಜಗತ್ತಿಗೆ ಅದರ ಸಂದೇಶ ಮುಟ್ಟಲರಿಯದು. ಹಿಂದುಸ್ಥಾನವಿನ್ನೂ ರಾಟಿಯನ್ನು ತನ್ನದಾಗಿ ಮಾಡಿಕೊಂಡು ತೋರಿಸಿಲ್ಲ. ಈ ತಪ್ಪು ರಾಟಿಯದಲ್ಲ. ಹಿಂದುಸ್ಥಾನಕ್ಕೂ ಜಗತ್ತಿಗೂ ರಾಟಿಯೊಂದೇ ರಕ್ಷಾಮಂತ್ರವೆಂಬಲ್ಲಿ ನನಗೆ ಎಳ್ಳಷ್ಟೂ ಸಂದೇಹವಿಲ್ಲ. ಹಿಂದುಸ್ಥಾನವು ಯಂತ್ರಗಳ ದಾಸ್ಯಕ್ಕೆ ತಲೆಯೊಡ್ಡಿದರೆ, ಆಗ ಜಗತ್ತಿಗೆ ದೇವರೇ ಗತಿ, ಎನ್ನುವೆ ನಾನು."

"ಹಿಂದುಸ್ಥಾನಕ್ಕೆ ಅದಕ್ಕಿಂತಲೂ ಎಷ್ಟೋ ಉದಾತ್ತವಾದ ಕರ್ತವ್ಯವೊಂದಿದೆ," ಗಾಂಧೀಜಿ ಮುಂದುವರಿದರು. "ಅದೆಂದರೆ ಜಗತ್ತಿನಲ್ಲಿ ಶಾಂತಿ ಸೌಹಾರ್ದಗಳನ್ನು ನೆಲೆಗೊಳಿಸುವದು ಬರಿ ಪರಿಷತ್ತುಗಳಿಂದ ಶಾಂತಿಯನ್ನು ಸ್ಥಾಪಿಸುವದು ಆಗದಮಾತು. ಅತ್ತ ಪರಿಷತ್ತುಗಳು ನಡೆಯುತ್ತಲೆ ಇದ್ದಂತೆ ಇತ್ತ ಶಾಂತಿಭಂಗ ಮಾಡಲ್ಪಡುತ್ತಿರುವದನ್ನು ನಾವು ನೋಡುತ್ತಿದ್ದೇವೆ."

"ಇದೀಗ ದುಃಖದ ಸಂಗತಿ—" ಫ್ರೀಮನ್ನರು ನುಡಿದರು. "ಹಿಂದುಸ್ಥಾನವೇ ಜಗತ್ತಿನ ದಾರಿ ತೋರಬೇಕು. ಆದರೆ ಅದೇ ವಿಪ್ಲವಾವಸ್ಥೆಯಲ್ಲಿದೆ. ಯಾವುದಾದರೊಂದು ದೇಶ ನಿಜವಾಗಿ ರಾಟಿಯನ್ನು ಸ್ವೀಕರಿಸಬಹುದಾಗಿದ್ದರೆ ಅದೀಗ ಹಿಂದುಸ್ಥಾನ. ಅದು ಸ್ವೀಕರಿಸುವದೆಂದು ನೀವೆಣಿಸುತ್ತೀರಾ ?"

"ಅದು ಸ್ವೀಕರಿಸುತ್ತಿದೆ" ಎಂದು ಗಾಂಧೀಜಿ ಉತ್ತರವಿತ್ತರು. "ಆದರೆ ಅದು ಬಹಳ ನಿಧಾನವಾಗಿ ಹಾಗೆ ಮಾಡುತ್ತಿದೆಯೆಂದು ನಾನು ಒಪ್ಪಿಕೊಳ್ಳುವೆ. ಪಂಡಿತ ನೆಹರೂ ಅವರು ಖಾದಿಯನ್ನು "ನಮ್ಮ ಸ್ವಾತಂತ್ರ್ಯದ ಕೀಲಿ ಕೈ" ಎಂದಿದ್ದಾರೆ. ಆದರೆ ಅದು ಮರುಳರ ಮತ್ತು ಗತಿಗೇಡಿಗಳ ಹವ್ಯಾಸವಾಗಿರುವಷ್ಟು ದಿನ ಸ್ವಾತಂತ್ರ್ಯದ ಕೀಲಿ ಕೈಯಾಗಲರಿಯದು. ಮನುಷ್ಯನಿಗೆ ಅಸಾಧ್ಯವಾದ ಕೆಲಸಗಳೆಷ್ಟೋ ಇವೆ. ಆದರೆ ದೇವರಿಗೆ ಎಲ್ಲವೂ ಸಾಧ್ಯ. ದೇವರೆಂಬ ಜಾಗ್ರತ್ ಶಕ್ತಿ ಇಲ್ಲದಿದ್ದರೆ ರಾಟಿಗೆ ಸ್ಥಾನವೇ ಇಲ್ಲ.

"ರಾಟಿ ತಿರುಗಿಸುವವರನ್ನು ಮರುಳರು ಗತಿಗೇಡಿಗಳೆಂದು ಇಲ್ಲಿ ಹೇಳುವರೇನು ?" ಫ್ರೀಮನ್ನರು ತುಸು ಆಶ್ಚರ್ಯದಿಂದಲೇ ಕೇಳಿದರು.

"ಇಲ್ಲ. ಅಮೇರಿಕನ್ನರು ಹೇಳಬಹುದಾದುದನ್ನು ನಾನೇ ಮೊದಲು ಹೇಳಿ ಬಿಟ್ಟೆ ಇಷ್ಟೆ. ಸುರಕ್ಷಿತನಾಗಿರುವಗೋಸುಗ ನಾನೂ ನನ್ನನ್ನು ಆ ಹೆಸರಿನಿಂದ ಕರೆಸಿಕೊಳ್ಳಲು ಸಿದ್ಧನಾಗಿದ್ದೇನೆ. ಗೆಳೆಯನೊಬ್ಬನು ನನ್ನನ್ನು 'ವ್ಯವಹಾರಿಕ ಆದರ್ಶವಾದಿ'ಯೆಂದು ಕರೆದಿದ್ದಾನೆ."

"ನಾನು ಸರ್ವಸಾಮಾನ್ಯ ಬುದ್ಧಿಯ ಅಮೇರಿಕನ್ನನು. ಎಷ್ಟೋ ಅಮೇರಿಕನ್ನರೂ ರಾಟಿ ತಿರುಗಿಸುವವರನ್ನು ಮರುಳರೆಂದು ಕರೆಯಬಹುದೆಂದು ನಾನು ಹೇಳೆನು. ಆದರೆ ಅನೇಕ ಅಮೇರಿಕನ್ನರು ಗಹನವಾಗಿ ವಿಚಾರ ಮಾಡುತಲಿರುವರೆಂದೂ ಹೇಳಬಲ್ಲೆ. ನಾಗರಿಕತೆಯನ್ನು ಸರ್ವನಾಶದಿಂದ ಉಳಿಸಲು ಏನಾದರೂ ಒಂದು ಹಾದಿ ಹುಡಕಲೇಬೇಕಾಗಿದೆ. ಜೀವನವನ್ನು ಹೆಚ್ಚು ಸರಳವಾಗಿ ಮಾಡಬೇಕು."

"ಮಾನವನ ವ್ಯಕ್ತಿತ್ವವನ್ನು ಉಳಿಸಲು ಬೇರಾವ ಉಪಾಯವೂ ಇಲ್ಲ" ಗಾಂಧೀಜಿ ಉತ್ತರಿಸಿದರು. 'ಆ ಕನಿಷ್ಠನಿಗೂ' (Unto this Last) ಅರ್ಥಾತ್ ಸರ್ವೇ ಜನಾಃ ಸುಖಿನೋ ಭವಂತು) ಎಂಬ ವಾಕ್ಯದ ಅನುಯಾಯಿ ನಾನು. ಆ ಪುಸ್ತಕ (ರಸ್ಕಿನ್ನನ Unto this Last) ದಿಂದ ನನ್ನ ಜೀವನದ ಮುಖವೇ ಬದಲಾಯಿತು. ಜಗತ್ತಿನಿಂದ ನಾವು ಏನನ್ನು ಅಪೇಕ್ಷಿಸುತ್ತೇವೊ ಅದನ್ನು ನಾವು ಕನಿಷ್ಠನಿಂದ ಕನಿಷ್ಠ, ಕಡೆಯವನಿಂದ ಕಡೆಯವನ ಸಲುವಾಗಿ ಮಾಡಲು ಸಿದ್ಧರಾಗಬೇಕು. ಎಲ್ಲರಿಗೂ ಸಮಾನವಾದ ಸಂಧಿ ದೊರೆಯಬೇಕು. ಆ ಸಂಧಿಯನ್ನೊಂದು ಕೊಡಿರಿ. ಪ್ರತಿಯೊಂದು ಮಾನವ ಪ್ರಾಣಿಯೂ ಆಧ್ಯಾತ್ಮಿಕ ಉನ್ನತಿಯನ್ನು ಸಾಧಿಸಿಕೊಳ್ಳಬಲ್ಲದು. ಅದೀಗ ರಾಟಿಯ ಇಂಗಿತ"

"ಅಮೇರಿಕನ್ನರೂ ರಾಟಿಯನ್ನು ಹಿಡಿಯಬೇಕೆಂದು ನೀವು ಆಶಿಸುತ್ತೀರಾ?" ಫ್ರೀಮನ್ನರು ಮತ್ತೆ ಕೇಳಿದರು.

"ಹೌದು," ಗಾಂಧೀಜಿ ಮಾರುತ್ತರ ಕೊಟ್ಟರು. "ಆದರೆ ಇಲ್ಲಿ ಅದು ಬಲವಾಗಿ ಬೇರೂರುವ ಮುನ್ನ ಬೇರಾರಾದರೂ ಅದನ್ನು ಕೈಕೊಳ್ಳುವರೆಂಬ ಭರವಸೆ ನನಗಿಲ್ಲ. ಬದಲಿಗೆ ಹಿಂದುಸ್ಥಾನ ಅದನ್ನು ತನ್ನ ವಸ್ತ್ರಕ್ಕಾಗಿ ಅವಲಂಬಿಸಿದರೆ, ಆಗ ನಾನು ಜಗತ್ತಿಗೆ ಉಪದೇಶಿಸುವ ಅವಶ್ಯಕತೆಯೇ ಬೀಳದು. ಅದು ತಾನಾಗಿಯೇ ಅನುಸರಿಸುವದು. ಇಂದು ಹಿಂದುಸ್ಥಾನದ ಮೇಲೆ ದಾಳಿಯಿಟ್ಟಿರುವ ಪಾಶ್ಚಾತ್ಯ ಯಂತ್ರಗಳ ರಭಸವೆಂಥದೆಂದರೆ, ಅದನ್ನು ತಾಳಿಕೊಂಡು ಉಳಿದರೆ ಹಿಂದುಸ್ಥಾನ ದೊಡ್ಡ ಇಂದ್ರಜಾಲವನ್ನೇ ತೋರಿಸಿದಂತೆಯೆ ಸರಿ. ಇಂದು ಎಲ್ಲವೂ ತದ್ವಿರುದ್ಧವಾಗಿರುವಂತೆ ತೋರುತಿದೆಯೆಂದು ನಾನೊಪ್ಪುತ್ತೇನೆ. ಒಳ ಜಗಳಗಳನ್ನೇ ನೋಡಿರಿ."

"ಆದರೆ ನೀವಿನ್ನೂ ಆಶೆಬಿಟ್ಟಿಲ್ಲ ?"

"ನಾವೆಣಿಸುವದಕ್ಕಿಂತಲೂ ಹೆಚ್ಚು ನಮ್ಮ ಸಾಮೀಪ್ಯದಲ್ಲಿರುವ ಆ ಜಾಗ್ರತ್ ಶಕ್ತಿಯಲ್ಲಿ ನನಗೆ ವಿಶ್ವಾಸವಿರುವಷ್ಟು ದಿನ ನಾನು ಆಶೆ ಬಿಡಲಾರೆ. ಆದರೆ ನಿಮಗೊಂದು ಮರು ಸವಾಲು ಕೇಳುವೆ? ಕುಬೇರನ ಭಕ್ತರಾದ ಅಮೇರಿಕನ್ನರಾದರೂ ನಿರುದ್ಯೋಗ, ದಾರಿದ್ರ್ಯ, ಲಂಚ-ವಂಚನೆಗಳನ್ನು ನಿರ್ನಾಮ ಮಾಡಿರುವರೆ?"

"ಇದರ ಉತ್ತರ ಸ್ವಯಂಸಿದ್ಧವಾಗಿಯೆ ಇದೆ."

ಗಾಂಧೀಜಿ ಮುಂದುವರಿದರು: "ಇಂಗ್ಲಂಡಾದರೂ ಮಾಡಿದೆಯೆ ? ಮುಂಗಾಣದಂತೆ ಮಾಡುವ ಅನೇಕ ಪ್ರಶ್ನೆಗಳನ್ನು ಅದಿನ್ನೂ ಬಿಡಿಸಬೇಕಾಗಿಲ್ಲವೆ? ಕ್ರಿಶ್ಚಿಯನ್ ಧರ್ಮದ ಅನುಯಾಯಿಯೆಂದು ಹೇಳಿಕೊಂಡು ಕ್ರಿಸ್ತ ತತ್ವಗಳಾಗಲಿ ಕ್ರಿಸ್ತನಾಗಲಿ ಇಲ್ಲದಂತೆ ವರ್ತಿಸುತ್ತಿರುವ ಪಶ್ಚಿಮ ದೇಶಗಳ ರೀತಿ ವಿಚಿತ್ರವೆನಿಸುವದಿಲ್ಲವೆ? ಅದಿದ್ದಿದ್ದರೆ ಯುದ್ಧಗಳೇ ಸಂಭವಿಸುತ್ತಿರಲಿಕ್ಕಿಲ್ಲವೆ? ಯೇಸುವಿನ ಸಂದೇಶಕ್ಕೆ ನಾನು ಹಚ್ಚುವ ಅರ್ಥ ಇದು. ಹಿಂದುಸ್ಥಾನದಲ್ಲಿ ಎಷ್ಟೇ ಅಜ್ಞಾನ ಅಂಧಶ್ರದ್ಧೆಗಳಿದ್ದರೂ ನಮ್ಮ ಅಂತರಂಗದ ಆಳದಲ್ಲಿ ಪರಮಾತ್ಮನಲ್ಲಿ ವಿಶ್ವಾಸ—ಧರ್ಮಬುದ್ಧಿ ಬೇರೂರಿದೆ."

"ಎಲ್ಲ ಪತ್ರಿಕೋದ್ಯೋಗಿಗಳೂ ಇತರರೂ ಅದನ್ನು ಕಂಡುಕೊಂಡಿದ್ದಾರೆ," ಫ್ರೀಮನ್ನರು ಒಪ್ಪಿಕೊಂಡರು. "ಆದರೂ ಒಮ್ಮೊಮ್ಮೆ ನಾನು ನಿರಾಶನಾಗುವೆ. ನಾನು ಇದೀಗ ಸಂಚರಿಸಿ ಬಂದಿರುವ ಗುಡ್ಡಗಾಡಿನ ಪ್ರದೇಶದಲ್ಲಿ ಪಂಡಿತ ನೆಹರೂ ಅವರ ಮೇಲಾದ ದಾಳಿಯನ್ನು ನೋಡಿರಿ ಬಂಗಾಲದಲ್ಲಿ ಜರಗಿದ್ದನ್ನಾದರೂ ನೆನೆಯಿರಿ, ನೀವೂ ಕೆಲ ಕ್ಷಣಗಳಲ್ಲಿ ಇವೆಲ್ಲದರಿಂದ ಭಗ್ನಾಶರಾಗಿರಬಹುದು. ಇಂದಿನ ಕ್ರಿಶ್ಚನ್ನರು ಯೇಸುವನ್ನು ಪರಿತ್ಯಜಿಸಿದಂತೆ ಇಂದಿನ ಇಸ್ಲಾಮು ಅನುಯಾಯಿಗಳೂ ತಮ್ಮ ಗುರುವನ್ನು ತಿರಸ್ಕರಿಸಿದ್ದಾರೆಂದು ನೀವೆನ್ನುವಿರಾ ?"

"ನಾನು ಬಹಿರಂಗವಾಗಿ ಹೇಳಿದ್ದೇನೆ," ಗಾಂಧೀಜಿಯೆಂದರು. "ಆಹಾ ಇಂದು ಮಹಮ್ಮದರೆಲ್ಲಿ? ಅವರ ಶಾಂತಿ ಸಂದೇಶವೆಲ್ಲಿ? ಮಹಮ್ಮದರಿಂದು ಹಿಂದುಸ್ಥಾನಕ್ಕೆ ಬಂದಿದ್ದರೆ, ಅವರ ಅನುಯಾಯಿಗಳೆಂದು ಹೇಳಿಕೊಳ್ಳುವವರನೇಕರನ್ನು ಧಿಕ್ಕರಿಸಿ, ನನ್ನನ್ನು ನಿಜವಾದ ಮುಸ್ಲಿಮನೆಂದು ಅಂಗೀಕರಿಸುತ್ತಿದ್ದರೆಂದೂ ಕ್ರಿಸ್ತನೂ ನನ್ನನ್ನು ನಿಜವಾದ ಕ್ರೈಸ್ತನೆಂದು ಒಪ್ಪಿಕೊಳ್ಳುತ್ತಿದ್ದನೆಂದೂ ಈಚೆಗೆ ಒಂದು ಸಾರ್ವಜನಿಕ ಸಭೆಯಲ್ಲಿ ನಾನು ಸಾರಿದ್ದುಂಟು."

"ಮನುಷ್ಯನನ್ನು ದೇವರ ಕಡೆಗೆ ಅರ್ಥಾತ್ ಕ್ರಿಸ್ತನ ಇಲ್ಲವೆ ಮಹಮ್ಮದನ ಉಪದೇಶಗಳ ಹತ್ತಿರ ಮರಳಿ ಒಯ್ಯುವ ಬಗೆ ಹೇಗೆ?" ಎಂದು ಫ್ರೀಮನ್ನರು ಮುಂದೆ ಕೇಳಿದರು.

"ನನ್ನ ಉತ್ತರ ಹೀಗೆ:" ಗಾಂಧೀಜಿ ಬದಲಿತ್ತರು. "ಯೇಸು ತನ್ನ ಅನುಯಾಯಿಗಳಲ್ಲೊಬ್ಬನಿಗೆ ಹೇಳಿದ್ದು: 'ಸ್ವರ್ಗದಲ್ಲಿರುವ ನನ್ನ ತಂದೆಯ ಇಚ್ಛೆಯಂತೆ ನಡೆದುಕೋ, ಬರಿ ಪ್ರಭೋ ಪ್ರಭೋ ಎಂದು ಒದರಬೇಡ.' ಅದು ನಿಮಗೂ ನನಗೂ ಎಲ್ಲರಿಗೂ ಅನ್ವಯಿಸುವ ಮಾತು. ಸಾಕ್ಷೀ ಪರಮಾತ್ಮನಲ್ಲಿ ನಮಗೆ ವಿಶ್ವಾಸವೊಂದಿದ್ದರೆ ಎಲ್ಲವೂ ಸರಿಹೋಗುವದು ಈ ವಿಶ್ವಾಸವನ್ನು ಕೊನೆಗಳಿಗೆಯ ವರೆಗೂ ಕಾಯ್ದುಕೊಂಡೆನೆಂಬ ಭರವಸೆ ನನಗುಂಟು. ನನ್ನ ಅನೇಕ ತಪ್ಪು ತಡೆಗಳೂ ಸೋಲುಗಳೂ ನನಗೆ ಚನ್ನಾಗಿ ಗೊತ್ತು. ಹೀಗಿದ್ದರೂ ಪರಮಾತ್ಮನಲ್ಲಿ ನನ್ನ ವಿಶ್ವಾಸ ದಿನ ದಿನಕ್ಕೂ ಹೆಚ್ಚು ಉಜ್ವಲವಾಗುತ್ತಿದೆ. ಹಾಗಾಗದಿದ್ದರೆ, ಸಹಾಯವಿಲ್ಲದೆ, ಪಾರಾಗುವ ಹಾದಿಯಿಲ್ಲದೆ ಮಾನಹರಣದ ಗಂಡಾಂತರಕ್ಕೆ ಸಿಲುಕಿರುವ ಹೆಣ್ಣುಮಕ್ಕಳಿಗೆ ನಾನು ಸೂಚಿಸಿದ ಔಷಧವನ್ನೆ—ಅಂದರೆ ಆತ್ಮಹತ್ಯೆಯನ್ನು—ನಾನೂ ತೆಗೆದುಕೊಳ್ಳುತ್ತಿದ್ದೆ.

"ರೋಗೋಪಶಮನದಲ್ಲಿ ರಾಟಿ ಉಪಯೋಗ ಬೀಳಬಹುದೆಂದು ನೀವು ವಿಚಾರಿಸಿರುವಿರಾ?" ಮೂಲ ಪ್ರಶ್ನೆಯ ಕಡೆಗೆ ಹೊರಳಿ ಕೊನೆಗೆ ಫ್ರೀಮನ್ನರು ಕೇಳಿದರು.

"ಹೌದು," ಎಂದರು ಗಾಂಧೀಜಿ. "ಗ್ಲಾಸ್ಗೊ ಪ್ರೊಫೆಸರರೊಬ್ಬರು ಕಳಿಸಿದ ಆ ವಿಷಯದ ಅಲ್ಪಸ್ವಲ್ಪ ಸಾಹಿತ್ಯವನ್ನು ಓದಿದ್ದೇನೆ. ಬಂಗಾಲದ ಒಂದು ಸೆರೆಮನೆಯ ನಿವೃತ್ತ ಸುಪರಿಂಟೆಂಡೆಂಟರೊಬ್ಬರು ಹುಚ್ಚು ಹಿಡಿದವರನ್ನು ಗುಣಪಡಿಸಲು ರಾಟಿಯಿಂದ ಮುಖ್ಯವಾಗಿ ಅದರ ನಾದದ ಪ್ರಶಾಂತ ಮಾಧುರ್ಯದಿಂದ ಎಷ್ಟು ಉಪಯೋಗವಾಗುವದೆಂದು ನನಗೆ ಬರೆದಿದ್ದರು."

"ಚರಖಾವನ್ನು 'ಚಿಂತನ ಯಂತ್ರ' ವೆಂದು ಅಮೇರಿಕೆಗೆ ಪರಿಚಯ ಮಾಡಿಕೊಡಬೇಕೆಂದಿದ್ದೇನೆ," ಎಂದು ಫ್ರೀಮನ್ನರು ಕೊನೆಗೆ ಉಸಿರಿದರು, "ನೂಲುವ ವರ್ಗಕ್ಕೆ ನಾನು ಹೋಗುತ್ತಿದ್ದಾಗ, ನಾನೊಬ್ಬನೇ ರಾಟಿಯ ಬಳಿ ಕುಳಿತರೆ ಅದು ನನ್ನನ್ನು ಚಿಂತಿಸಲು, ಆಲೋಚನ ಮಾಡಲು ಪ್ರೇರೇಪಿಸುತ್ತಿದ್ದುದನ್ನು ಕಂಡುಕೊಂಡೆ. ಅಮೇರಿಕನ್ನರು ತುಸು ನೂಲು ತೆಗೆಯಲು ಮನಸು ಮಾಡಿದರೆಂದರೆ ಅವರು ಸ್ವಲ್ಪ ಚಿಂತನೆಮಾಡಲು ಸಮರ್ಥರಾದಾರು. ಇಲ್ಲದಿದ್ದರೆ ಅವರಿಗೆ ಆಲೋಚನೆಗೆ ವೇಳೆಯೇ ಸಿಗುವದಿಲ್ಲ. ಚಿಂತನೆಗೆ ತೊಡಗಿದರೆಂದರೆ ಅವರು ಅಣುಬಾಂಬನ್ನು ಮರೆತು ಬಿಡಲೂ ಬಹುದು."

ಹೊಸದಿಲ್ಲಿ — ಪ್ಯಾರೇಲಾಲ
೨೬—೧೦—೪೬

## ನಡುಗಾಲ ಸರಕಾರದ ಭವಿತವ್ಯವೇನು ?

ಮುಸ್ಲಿಂಲೀಗು ಇತ್ತೀಚೆಗೆ ತಳೆದ ಇತ್ತಂಡ ಧೋರಣೆಯ ಮೂಲಕ ನಡುಗಾಲ ಸರಕಾರ ಬಹಳದಿನ ಬಾಳಲಾರದೆಂದು ತೋರುತ್ತದೆ. ವೈಸರಾಯರು ಪಂಡಿತ ಜವಾಹರಲಾಲರಿಗೆ ಕೊಟ್ಟ ಆಶ್ವಾಸನವನ್ನು ಪೂರಯಿಸಬೇಕು ಇಲ್ಲವೆ ಮುಸ್ಲಿಂಲೀಗ ಮಂತ್ರಿಗಳಿಗೆ ರಾಜೀನಾಮೆಯನ್ನು ಕೊಡಲಿಕ್ಕೆ ಹಚ್ಚಬೇಕು. ಅವರು ರಾಜೀನಾಮೆ ಕೊಡಲು ಒಪ್ಪದಿದ್ದರೆ ಅವರನ್ನು ಕೆಲಸದಿಂದ ಕಿತ್ತಿಹಾಕಬೇಕಾಗುವದು ಎಂದು ಹೊಸದಿಲ್ಲಿಯಲ್ಲಿ ಅಭಿಪ್ರಾಯ ವ್ಯಕ್ತ ಮಾಡಲಾಗುತ್ತದೆ. ಆ ಬಗೆಯ ಅಧಿಕಾರ ವೈಸರಾಯರಿಗೆ ಇದೆಯೊ ಹೇಗೆಂಬ ಬಗ್ಗೆ ಕಾಯಿದೆ ಪಂಡಿತರಲ್ಲಿ ವಿಚಾರವಿನಿಮಯ ನಡೆದಿದೆಯಂತೆ.

## ಚರಖಾ ಮಂಡಲ

೧) ಚರಖಾ ಮಂಡಲದ ಸದಸ್ಯರು ವರ್ಷಕ್ಕೆ ೬ ಲಡಿ ಅಥವಾ ತಿಂಗಳಿಗೆ ೪೨೦ ಸುತ್ತು ನೂಲು ಕೊಡುವರು. ಮಂಡಲದವರು ಗೊತ್ತುಪಡಿಸಿದ ದಿನಗಳಲ್ಲಿ ಮತ್ತು ಸ್ಥಳದಲ್ಲಿ ನೂಲು ತೆಗೆಯಬೇಕೆಂಬುದು ಕರಾರು. ತುನಾಯಿಯಿಂದ ಸದಸ್ಯರು ತಾವೇ ಹಂಜಿಮಾಡಿಕೊಳ್ಳಬೇಕು ಮತ್ತು ನೂಲಬೇಕು. ಅವರೇ ಸಹಯೋಗಿ ಸದಸ್ಯರು.

೨) ಈ ಸಹಯೋಗಿ ಸದಸ್ಯರು ೧ ರೂಪಾಯಿ ಪ್ರವೇಶ ವಂತಿಗೆ ಕೊಡಬೇಕು. ಮತ್ತು ಪ್ರತಿ ತಿಂಗಳು ೪೨೦ ಸುತ್ತು ನೂಲು ಕೊಡಬೇಕು. ಮೊದಲನೆ ಕಲಮಿನಲ್ಲಿ ಹೇಳಿದ ಕರಾರಿನನ್ವಯ ಅವರು ನೂಲು ತೆಗೆಯಬೇಕು. ಪ್ರತಿ ತಿಂಗಳು ಗೊತ್ತುಪಡಿಸಿದಷ್ಟು ನೂಲು ಕೊಡುವ ವರೆಗೆ ಅವನು ಸಹಯೋಗಿ ಸದಸ್ಯನಾಗಿ ಉಳಿಯುವನು.

೩) ಸಾಮೂಹಿಕ ನೂಲುವ ಸಮಯವನ್ನು ಮಂಡಲದವರು ಗೊತ್ತುಪಡಿಸಬೇಕಲ್ಲದೆ ಎಷ್ಟು ಸಲ ಆ ರೀತಿ ನೂಲಬೇಕೆಂಬದನ್ನು ನಿರ್ದಿಷ್ಟಪಡಿಸಬೇಕು. ಎರಡು ತಿಂಗಳ ನೂಲು ಕೊಡುವದಕ್ಕೆ ತಪ್ಪಿದ ಸಹಯೋಗಿಯ ಹೆಸರನ್ನು ಕಿತ್ತಿ ಹಾಕಲಾಗುವದು. ಅವನು ಮತ್ತೆ ಸದಸ್ಯನಾಗಬಯಸಿದರೆ ಮತ್ತೊಮ್ಮೆ ಅವನು ಪ್ರವೇಶ ವಂತಿಗೆ ಕೊಡಬೇಕಾಗುವದು. ಅದೇ ವರ್ಷದಲ್ಲಿ ಮೂರನೆಯ ಸಲ ಯಾವನೂ ಸದಸ್ಯನಾಗಿ ಸೇರಲಾರನು.

೪) ಪ್ರತಿಮೊಹಲ್ಲಾದಲ್ಲಿ ಹಳ್ಳಿಯಲ್ಲಿ ಮತ್ತು ಸಣ್ಣ ನಗರದಲ್ಲಿ ಇಂಥ ಮಂಡಲಗಳನ್ನು ಸ್ಥಾಪಿಸುವ ಪ್ರಯತ್ನ ನಡೆಯಬೇಕು. ಪ್ರತಿ ಜಿಲ್ಲೆ ಇಲ್ಲವೆ ಪ್ರಾಂತಕ್ಕೊಂದು ಕೇಂದ್ರ ಕಚೇರಿಯಿರತಕ್ಕದ್ದು—

೫) ಇಡೀ ದೇಶಕ್ಕಾಗಿಯೆಂದು ಪ್ರತಿ ತಿಂಗಳ ಒಂದು ರಾಷ್ಟ್ರೀಯ ದಿನವನ್ನು ಗೊತ್ತುಪಡಿಸುವ ವಿಚಾರವಿದೆ. ಅಂಥ ರಾಷ್ಟ್ರೀಯ ದಿನದಲ್ಲಿ ಒಂದೇ ಕಾಲಕ್ಕೆ ಆಯಾ ಮಂಡಲದವರು ಸಾಮೂಹಿಕ ನೂಲು ತೆಗೆಯಬೇಕು.

೬) ಈ ಮಂಡಲಗಳ ಸ್ಥಾಪನೆಯ ಜತೆಯಲ್ಲಿಯೆ ಬೇರೆ ಬೇರೆ ಸ್ಥಳಗಳಲ್ಲಿ ನೂಲುವ ವರ್ಗಗಳನ್ನು ತೆರೆಯುವ ಪ್ರಯತ್ನ ಮಾಡಲಾಗುತ್ತಿದೆ— ಈ ವರ್ಗಗಳಲ್ಲಿ ಕಡದಿಂದ ಹತ್ತಿ ಆರೆಯುವದರಿಂದ ಪ್ರಾರಂಭವಾಗಿ ತುನಾಯಿ, ಹಂಜಿಮಾಡುವದು ಮತ್ತು ನೂಲು ತೆಗೆವ ವರೆಗಿನ ಬೇರೆ ಬೇರೆ ವಿಧಾನಗಳನ್ನು ಕಲಿಸಲಾಗುವದು, ಪ್ರವೇಶವಂತಿಗೆ ಒಂದು ರೂಪಾಯಿ. ನೂಲುವ ಬೇರೆ ಬೇರೆ ವಿಧಾನಗಳನ್ನು ಕಲಿಯುವದಕ್ಕಾಗಿ ಚರಖಾ ವರ್ಗಗಳನ್ನು ಸೇರಿದ ಒಂದು ತಿಂಗಳೊಳಗಾಗಿ ಮಂಡಲದಲ್ಲಿ ಸೇರಬಯಸುವವರಿಗೆ ಪ್ರತ್ಯೇಕ ಪ್ರವೇಶವಂತಿಗೆ ಕೊಡುವ ಅವಶ್ಯಕತೆಯಿಲ್ಲ. ಅವರು ಪ್ರತಿ ತಿಂಗಳ ೪೨೦ ಸುತ್ತು ನೂಲು ಕೊಟ್ಟರೆ ತೀರಿತು.

೭) ಪ್ರತಿ ತಿಂಗಳ ನೂತ ನೂಲು ಮಂಡಲದ ಒಡೆತನದಿದ್ದರೂ ಆ ನೂಲಿನಿಂದ ಖಾದಿಯನ್ನು ಕೊಳ್ಳಲು ನೂಲುವವನಿಗೆ ಅವಕಾಶ ಕಲ್ಪಿಸಿ ಕೊಡಲಾಗಿದೆ. ಸಹಯೋಗಿ ಸದಸ್ಯರಿಗೆ ಖಾದಿ ಕೊಡುವಲ್ಲಿ ಮೊದಲನೆಯ ಪ್ರಾಶಸ್ತ್ಯವಿದೆ.

ಕನೂ ಗಾಂಧಿ

(ಭಂಗಿವಸತಿಯಲ್ಲಿ ನಡೆದ ಮೂರು ನೂಲುವ ವರ್ಗಗಳಿಂದ ಚರಖಾ ಮಂಡಲದ ಸಂಘಟನೆಯಾಗಿದೆ. ದೇಶದಲ್ಲೆಲ್ಲ ಇಂಥ ಮಂಡಲಗಳು ಸ್ಥಾಪಿತವಾಗುವದು ಅದೆಷ್ಟು ಸಂತೋಷಪ್ರದ! ಹಾಗಾಗುವ ವರೆಗೆ ದಿಲ್ಲಿಯಲ್ಲಿ ಹಲವು ಮಂಡಲಗಳು ಸ್ಥಾಪಿತವಾಗಬೇಕು. ಆಟ ಮತ್ತು ಮನರಂಜನೆಗಾಗಿ ವಿವಿಧ ಕೂಟಗಳಿವೆ. ರಾಷ್ಟ್ರೀಯ ಕಾರ್ಯಕ್ಕಾಗಿ ಅನೇಕ ಮಂಡಲಗಳ ಸ್ಥಾಪನೆ ಏಕಾಗಬಾರದು.?

೧೮-೧೦-೪೬ ಮೋ. ಕ. ಗಾಂಧಿ
(ಹಿಂದುಸ್ಥಾನಿಯಿಂದ)



# ಅಹಿಂಸೆಯ ಸತ್ವಪರೀಕ್ಷೆ

## ಮಹಾತ್ಮರು ಒಬ್ಬಂಟಿಗರಾಗಿಯೆ ಶ್ರೀರಾಮಪುರಕ್ಕೆ ತೆರಳಿದರು

ಮಹಾತ್ಮಾ ಗಾಂಧಿಯವರ ಪೂರ್ವ ಬಂಗಾಲ ಪೀಡಿತ ಪ್ರದೇಶದ ಸಂಚಾರ ಹಾಗೆಯೆ ಮುಂದೆ ಸಾಗಿದೆ. ಹೋದಲ್ಲೆಲ್ಲ ಜನರು ಬಂದು ತಮ್ಮ ಕರ[illegible] ಕತೆಗಳನ್ನು ಹೇಳುತಿರುವರು. ಗಾಂಧೀಜಿಯವರು ಪ್ರಾರ್ಥನಾ ಸಭೆಗಳಲ್ಲಿ ಜನರಿಗೆ ಉಪದೇಶ ಮಾಡಿ ಧೈರ್ಯ ತುಂಬುತಿರುವರು. ಹಿಂದುಗಳು ಪೂರ್ವ ಬಂಗಾಲ ಪ್ರಾಂತವನ್ನು ಬಿಟ್ಟು ಹೊರಬೀಳಬಾರದೆಂದು ಅವರು ಒತ್ತಿ ಒತ್ತಿ ಹೇಳುತಿರುವರು.

ರಾಮಗಂಜ ಸಭೆಯಲ್ಲಿ ಮಾತಾಡುತ್ತ ಗಾಂಧೀಜಿ ಹೀಗೆ ಹೇಳಿದರು.

ನನಗೆ ಬೆದರಿಕೆ ಹಾಕುವ ಪತ್ರಗಳು ಬರುತಿವೆ. ನಾನು ತಮ್ಮನ್ನು ಮುರಿಬಡಿಯಲು ಇಲ್ಲಿಗೆ ಬಂದಿದ್ದೇನೆಂದು ಕೆಲ ಮುಸಲ್ಮಾನರು ಭಾವಿಸುತ್ತಾರೆ. ನನ್ನ ಜೀವನದಲ್ಲಿಯೆ ನಾನು ಯಾರನ್ನೂ ಹತ್ತಿಕ್ಕಿಲ್ಲವೆಂದು ಅವರಿಗೆ ಹೇಗೆ ತಿಳಿಹೇಳಲಿ? ಬಿಹಾರ ತನ್ನ ಹುಚ್ಚುತನವನ್ನು ಬಿಟ್ಟುಕೊಡದಿದ್ದರೆ ನಾನು ಪ್ರಾಣಾಂತಿಕ ಉಪವಾಸ ಮಾಡುವೆನೆಂದು ಸಾರಿದ್ದೇನೆ. ಬಿಹಾರ ಪರಿಸ್ಥಿತಿಯನ್ನು ನಾನು ದಿನಾಲು ಅನುಲಕ್ಷಿಸುತ್ತೇನೆ. ಅದು ಈಗ ಶಾಂತವಿದೆ ಎಂದು ನನಗೆ ತಿಳಿದಿದೆ. ಬಂಗಾಲದ ಮುಸಲ್ಮಾನರ ವಿರುದ್ಧ ನೀವೇಕೆ ಉಪವಾಸ ಮಾಡಲಿಲ್ಲ ಎಂದು ಕೇಳುವ ತಂತಿಗಳು ಸಿಟ್ಟಿಗೆದ್ದ ಹಿಂದುಗಳ ಕಡೆಯಿಂದ ಬರುತಿವೆ. ಇಲ್ಲಿ ನಾನು ಮುಸಲ್ಮಾನರ ಮಧ್ಯದಲ್ಲಿದ್ದೇನೆ. ಇಲ್ಲಿ ಹಿಂದೂ ವಾಡ ಮನೆಯಲ್ಲಿ ಇರುವದು ನನಗೆ ಬೇಕಿಲ್ಲ. ನನಗೆ ಲೀಗಿನ ಮುಸಲ್ಮಾನರ ಮನೆಯಲ್ಲಿರಲು ಬಲವಾದ ಇಚ್ಛೆಯಿದೆ. ನಾನು ಲೀಗ ಮಿತ್ರರೊಡನೆ ಇರತೊಡಗಿದರೆ ಹಿಂದುಗಳಿಗೂ ವಿಶ್ವಾಸ ಹುಟ್ಟಿ ಅವರು ತಮ್ಮ ಮನೆಗೆ ಮರಳಿ ಬರಬಹುದು. ಅದಲ್ಲದೆ ಮುಸಲ್ಮಾನ ಮಿತ್ರರಿಗೂ ನನ್ನನ್ನು ಸಮೀಪದಿಂದ ನಿರೀಕ್ಷಿಸಲು ಸಂಧಿ ದೊರೆಯುವದು ಎಂದು ಮುಂತಾಗಿ ನುಡಿದರು.

### ಅತ್ಯಲ್ಪಾಹಾರ ವ್ರತದ ಪಾರಣೆ

ಬಿಹಾರದಲ್ಲಿಯ ಅತ್ಯಾಚಾರದ ನಿಮಿತ್ತ ಗಾಂಧೀಜಿಯವರು ಅತ್ಯಲ್ಪಾಹಾರದ ವ್ರತವನ್ನು ಪ್ರಾರಂಭಿಸಿದ್ದರಷ್ಟೆ. ಆದರೀಗ ಅಲ್ಲಿನ ಪರಿಸ್ಥಿತಿ ಶಾಂತವಾಗಿದೆಂದು ಡಾ. ರಾಜೇಂದ್ರ ಪ್ರಸಾದರಿಂದ ತಂತಿ ಬಂದದ್ದರಿಂದ ಗಾಂಧೀಜಿ ತಮ್ಮ ವ್ರತದ ಪಾರಣೆಮಾಡಿದರು. ೧೯ ನೇ ತಾರೀಕಿನಿಂದ ಅವರು ಆಡಿನ ಹಾಲು ತೆಗೆದುಕೊಳ್ಳಲು ಪ್ರಾರಂಭಿಸಿದ್ದಾರೆ. ಪ್ರಕೃತಿಗೆ ಮಾನಿಸುತ್ತ ಸಹಿಸಿದಂತೆ ಅವರು ಮೊದಲಿನ ತಮ್ಮ ಆಹಾರ ತೆಗೆದುಕೊಳ್ಳಹತ್ತುವರು. ಅವರು ಈ ಬಗೆ ಹೊರಡಿಸಿದ ಪ್ರಕಟನೆಯಲ್ಲಿ 'ನನ್ನ ಅತ್ಯಲ್ಪಾಹಾರದ ಬಗ್ಗೆ ಯಾರೂ ವಿಮಂಚನೆಗೊಳಗಾಗಬಾರದು. ಬಿಹಾರದ ಸ್ಥಿತಿ ಸಂಪೂರ್ಣ ಶಾಂತವಿದೆ ಎಂದೂ ತಾವು ದಿಲ್ಲಿಗೆ ಮರಳಿ ಹೋಗುತ್ತಿರುವುದಾಗಿಯೂ ಡಾ. ರಾಜೇಂದ್ರ ಪ್ರಸಾದರು ತಂತಿಯಿಂದ ತಿಳಿಸಿದ್ದರಿಂದ ನಾನು ಆಡಿನ ಹಾಲು ತೆಗೆದುಕೊಳ್ಳಲು ಪ್ರಾರಂಭಿಸಿದ್ದೇನೆ. ಪ್ರಕೃತಿಗೆ ಮಾನಿಸುವದನ್ನು ನೋಡಿಕೊಂಡು ಮೆಲ್ಲಮೆಲ್ಲನೆ ಮೊದಲಿನ ಆಹಾರ ತೆಗೆದುಕೊಳ್ಳುವೆನು." ಎಂದಿದೆ.

### ಒಬ್ಬೊಂಟಿಗರಾಗಿಯೆ ಹೊರಟರು

ಮಹಾತ್ಮಾ ಗಾಂಧಿಯವರು ಅಹಿಂಸೆಯ ಸತ್ವಪರೀಕ್ಷೆ ಮಾಡುವ ತಮ್ಮ ಹೊಸ ಯೋಜನೆಯನ್ವಯ ೨೦ ನೇ ತಾರೀಕು ಶ್ರೀರಾಮಪುರಕ್ಕೆ ತೆರಳಿದರು. ಇವರೊಡನೆ ಬಂಗಾಲಿ ದ್ವಿಭಾಷಿಗಳಾದ ಪ್ರೊ: ನಿರ್ಮಲ ಬೋಸರೂ ಲಘುಲೇಖಕರಾದ ಶ್ರೀ ಪರಶುರಾಮರೂ ಮಾತ್ರ ಇದ್ದಾರೆ.

ಗಾಂಧೀಜಿಯವರು ಖಜೀರಖೇಲ ಬಿಟ್ಟು ತೆರಳುವಾಗಿನ ಪ್ರಸಂಗ ಅತ್ಯಂತ ಹೃದಯದ್ರಾವಕವಾಗಿದ್ದಿತು. ಅವರು ಹೊರಡುವದಕ್ಕಿಂತ ಸ್ವಲ್ಪ ಮೊದಲು ಚಿಕ್ಕ ಪ್ರಾರ್ಥನೆ ನಡೆಯಿತು. ಅದಕ್ಕೆ ಎಲ್ಲ ಸದಸ್ಯರು ಉಪಸ್ಥಿತರಾಗಿದ್ದರು. ಗಾಂಧೀಜಿಯವರು ಎಲ್ಲರಿಗೆ ಹೋಗಿ ಬರುತ್ತೇವೆಂದು ಹೇಳಿದಾಗ ಅವರನ್ನು ಬಿಟ್ಟು ಉಳಿದ ಎಲ್ಲರ ಕಣ್ಣಲ್ಲಿ ವಿಶೇಷವಾಗಿ ಡಾ. ಸುಶಿಲಾ ನಯ್ಯರ ಹಾಗು ಆ ವಾ ಗಾಂಧಿಯವರ ಕಣ್ಣಲ್ಲಿ ನೀರು ಬಂದಿದ್ದವು. ಗಾಂಧೀಜಿಯವರ ನಾವೆ ಕಣ್ಮರೆಯಾಗುವ ವರೆಗೂ ಇವರು ಅಳುತಿದ್ದರು. ಗಾಂಧೀಜಿ ಗಂಭೀರರಾಗಿದ್ದರು ಆದರೆ ನಾವೆ ಹೊರಟೊಡನೆ ಅವರು ಯಾವ ಶಬ್ದವಿಲ್ಲದೆ ನಿತ್ಯದ ತಮ್ಮ ನಗುಮುಖದೊಂದಿಗೆ ಬೀಳ್ಕೊಂಡರು. ಶ್ರೀರಾಮಪುರದಿಂದ ಗಾಂಧೀಜಿ ಕೆಳಗಿನ ಪ್ರಕಟನೆ ಹೊರಡಿಸಿರುವರು.

ಇಲ್ಲಿ ಅತಿಶಯೋಕ್ತಿ ಮತ್ತು ಸುಳ್ಳು ಎಲ್ಲೆಡೆ ತುಂಬಿರುವುದರಿಂದ ನನಗೆ ಸತ್ಯ ಕಾಣದಾಗಿದೆ. ಪರಸ್ಪರರ ವಿಷಯವಾಗಿ ಭಯಂಕರ ಅವಿಶ್ವಾಸವೂ ಕಾಣಬರುತಿದೆ. ಹಿಂದಿನ ಗೆಳೆತನ ಕೊನೆಗೊಂಡಿದೆ. ಅರವತ್ತು ವರುಷಗಳ ವರೆಗೆ ನನ್ನನ್ನು ರಕ್ಷಿಸಿದ ಮತ್ತು ದೇವತಾ ಸಮಾನವಾದ ಸತ್ಯ ಅಹಿಂಸೆಗಳೀಗ ತಮ್ಮ ಗುಣಗಳನ್ನು ತೋರದಾಗಿವೆ. ಅವುಗಳ ಸತ್ವ ಪರೀಕ್ಷೆ ಮಾಡಲು ಇಲ್ಲವೆ ನನ್ನ ಸತ್ವ ಪರೀಕ್ಷೆ ಮಾಡಿಕೊಳ್ಳಲು ನಾನು ಇಷ್ಟು ವರ್ಷ ನನ್ನೊಡನೆ ಇದ್ದ ಜನರನ್ನು ಮತ್ತು ನನ್ನ ಜೀವನವನ್ನು ಸುಗಮಮಾಡಿದವರನ್ನು ಬಿಟ್ಟುಗೊಟ್ಟು ನಾನು ಶ್ರೀರಾಮಪುರ ಎಂಬ ಹಳ್ಳಿಗೆ ಹೊರಟಿದ್ದೇನೆ. ನಾನು ಬಂಗಾಲಿ ಶಿಕ್ಷಕನೆಂದೂ ದ್ವಿಭಾಷಿಗಳೆಂದೂ ಶ್ರೀ ನಿರ್ಮಲಕುಮಾರ ಬೋಸರನ್ನೂ ನನಗೆ ಅತ್ಯಂತ ವಿಧೇಯ ನಿಃಸ್ವಾರ್ಥಿ ಹಾಗು ನಿರಾಡಂಬರ ನನ್ನ ಲಘುಲೇಖಕ ಶ್ರೀ ಪರಶುರಾಮರನ್ನು ನನ್ನೊಡನೆ ಕರೆದೊಯ್ಯುತ್ತಿದ್ದೇನೆ. ನನ್ನೊಡನೆ ಬಂದ ಬೇರೆ ಕಾರ್ಯಕರ್ತರು ನೌಖಾಲಿಯ ಬೇರೆ ಬೇರೆ ಹಳ್ಳಿಗೆ ಹೋಗಿ ಶಕ್ಯವಿದ್ದರೆ ಎರಡೂ ಜಾತಿಗಳ ನಡುವೆ ಶಾಂತಿ ಪ್ರಸ್ಥಾಪಿಸಲು ಪ್ರಯತ್ನಿಸುವರು. ಚಿಕ್ಕ ಆವಾಳನ್ನು ಬಿಟ್ಟರೆ ಉಳಿದವರೆಲ್ಲರೂ ಬಂಗಾಲೇತರರೇ ಇರುವರು. ಇದು ದುರ್ದೈವದ ಸಂಗತಿ. ಆದುದರಿಂದ ಇವರೆಲ್ಲರ ಸಂಗಡ ನಿರ್ಮಲಕುಮಾರ ಬೋಸರಂಥ ಒಬ್ಬ ಬಂಗಾಲಿ ಶಿಕ್ಷಕನೂ ದ್ವಿಭಾಷಿಯೂ ಹೋಗುವನು.

ಗಾಂಧಿಜಿಯವರು ಶ್ರೀರಾಮಪುರದಲ್ಲಿ ಕೇವಲ ಇಬ್ಬರು ಸಹಕಾರಿಗಳೊಡನೆ ಇರುತ್ತಿದ್ದುದನ್ನು ನೋಡಿ ಅನೇಕರಿಗೆ ವಿಮಂಚನೆಯುಂಟಾಗಿದೆ. ಈ ಭಾಗದಲ್ಲಿಯ ಸೇತುವೆಗಳು ಕೇವಲ ಎರಡು ಕಂಬ ಮತ್ತು ಬಾಂಬುಗಳಿಂದ ಕಟ್ಟಲ್ಪಟ್ಟವಿರುತಿರುವದರಿಂದ ದಾಟುವದು ಬಹಳ ಕಠಿನವಾಗಿದೆ. ಸಂಚಾರದ ಅನುಕೂಲತೆಗಳೂ ಬಹಳ ಕಡಮೆ. ಬಹುಶಃ ಪ್ರತಿಮನೆಯ ಸುತ್ತಲೂ ಭತ್ತದ ಗದ್ದೆಗಳು ಕಾಲುವೆಗಳು ಇವೆ. ಈ ಕಾಲದಲ್ಲಿ ಅವೆಲ್ಲ ಕಾಲುವೆಗಳು ಒಣಗಿ ಹೋಗುತಿವೆ.

ಬಂಗಾಲ ಮಂತ್ರಿಗಳಾದ ಶಮಸುದ್ದಿನ ಅಹಮ್ಮದರು ಗಾಂಧೀಜಿಯವರನ್ನು ಏಕಾಂತ ಸಭೆಗೆ ಆಮಂತ್ರಿಸಿರುವರೆಂದು ತಿಳಿಯುತ್ತದೆ. ರಾಮಗಾಂವ ಡಾಕ ಬಂಗಲೆಯಲ್ಲಿ ಕೂಡುವ ಈ ಪರಿಷತ್ತಿಗೆ ೧೫ ಹಿಂದುಗಳು ೧೫ ಮುಸಲ್ಮಾನರನ್ನು ಆಮಂತ್ರಿಸಲಾಗಿದ್ದು ಪರಸ್ಪರರಲ್ಲಿ ವಿಶ್ವಾಸ ಹುಟ್ಟಿಸುವ ಪ್ರಶ್ನೆಯ ಬಗ್ಗೆ ವಿಚಾರವಿನಿಮಯ ನಡೆಯುವದಂತೆ. ಗಾಂಧೀಜಿಯವರು ಈ ಆಮಂತ್ರಣಕ್ಕೆ ಇನ್ನೂ ಉತ್ತರ ಕೊಟ್ಟಿಲ್ಲ.

### ಗಾಂಧೀಜಿಯವರ ಚಟುವಟಿಕೆ

ಗಾಂಧೀಜಿಯವರು ಶ್ರೀರಾಮಪುರಕ್ಕೆ ಬಂದ ಕೂಡಲೆ ಸ್ಥಳಿಕ ಜನರನ್ನು, ಹೆಚ್ಚಾಗಿ ಮುಸಲ್ಮಾನರನ್ನು ಭೆಟ್ಟಿಯಾಗಲು ಪ್ರಾರಂಭಿಸಿದ್ದಾರೆ. ತಮ್ಮ ಕೂಡ ಕೆಲಸ ಮಾಡಲು ಸಿದ್ಧನಿರುವ ಪ್ರಸಂಗ ಬಿದ್ದರೆ ಶಾಂತಿ ಪ್ರಸ್ಥಾಪನೆಯಲ್ಲಿ ಮರಣ ಹೊಂದಲು ಕೂಡ ಸಿದ್ಧನಿರುವ ಒಬ್ಬನಾದರೂ ಮುಸಲ್ಮಾನನು ಸಿಕ್ಕುವನೊ ಹೇಗೆಂಬುದನ್ನು ಗಾಂಧೀಜಿ ಹುಡುಕುತಿರುವರು.

## ಹಳ್ಳಿಗಳು ತಮ್ಮ ಬಟ್ಟೆಯನ್ನು ಹೇಗೆ ಉತ್ಪಾದಿಸಿ ಕೊಳ್ಳಬಹುದು

"ಹರಿಜನ" ದ ೪—೮—೪೬ ರ ಸಂಚಿಕೆಯಲ್ಲಿ (ಕರ್ಮವೀರ ೫-೮-೪೬) ಮನುಸುಭೇದಾರರು ನನಗೆ ಬರೆದ ಪತ್ರದಿಂದ ಒಂದು ಯೋಜನೆಯನ್ನು ಎತ್ತಿ ಕೊಡುತ್ತಿದ್ದೆ "ರಾಸ್ತರಹಬಾದ" ದಲ್ಲಿ ಬರೆದ ಒಳ್ಳೆ ಕೌತುಕ ಪ್ರದವಾದ ಲೇಖ ಬರೆದಿದ್ದಾರೆ. ಅದರಿಂದ ಪ್ರಮುಖವಾದ ಎರಡು ಪರಿಚ್ಛೇದಗಳನ್ನು ಇಲ್ಲಿ ಎತ್ತಿ ಕೊಡುತ್ತಿದ್ದೇನೆ.

"ಕೈನೂಲು ತೆಗೆಯುವದರ ಆಧ್ಯಾತ್ಮಿಕ ವಿವರಕ್ಕಾಗಿ ನಾನೀ ಯೋಜನೆಯನ್ನು ಸಮರ್ಥಿಸುವದಿಲ್ಲ ಶತಮಾನ ಶತಮಾನಗಳಿಂದ ಇದ್ದು ಬಂದಂತೆ ರಾಟಿಯನ್ನು ಪುನಃ ಮನೆಯಲ್ಲಿಯೂ ಪ್ರತಿಷ್ಠಿಸುವದರಲ್ಲಿ ಒಂದು ಬಗೆಯ ಚಮತ್ಕಾರವಿರುವದು ನಿಜ. ಆದರೂ ಹಳ್ಳಿಗಾಡಿನ ಜನರನ್ನು ಉಡಿಸತೊಡಿಸುವ ಅತ್ಯುತ್ಕಟವಾದ ಆರ್ಥಿಕ ಅವಶ್ಯಕತೆಯೇ ನನ್ನ ಮುಖ್ಯ ಲಕ್ಷ್ಯ ಇಲ್ಲದಿದ್ದರೆ ಅವರು ಜೀವನದ ಈ ಅತಿ ಪ್ರಾಥಮಿಕ ಅವಶ್ಯಕತೆಯಿಂದ ವಂಚಿತರಾಗಿಯೇ ಬಾಳಬೇಕಾಗುವದು. ಅವರ ಮನೆ ಬಾಗಿಲಿಗೆ ಹತ್ತಿಯೊಂದನ್ನು ತಂದೊದಗಿಸಿದರೆ, ದೇವರು ಕೊಟ್ಟ ಕೈಗಳಿಂದಲೂ ಒಂದೇ ವಾರದೊಳಗೆ ಸಂಪಾದಿಸಬಹುದಾದ ಕೈಚಳಕದಿಂದಲೂ ಅವರು ತಮ್ಮ ಪರಿಸ್ಥಿತಿಯನ್ನು ಸುಧಾರಿಸಿಕೊಂಡು ತಮ್ಮ ಹೆಣ್ಣುಮಕ್ಕಳನ್ನು ಸಂಕಟಾವಸ್ಥೆಯಿಂದ ಪಾರುಮಾಡಲು ಸಮರ್ಥರಾಗಬೇಕು. ಈ ಯೋಜನೆಯನ್ವಯ ತಯಾರಿಸಿದ ಬಟ್ಟೆ ಕಳ್ಳಪೇಟಿಯ ಬಟ್ಟೆಗಿಂತ ಮಾತ್ರವಲ್ಲ; ಗಿರಣಿ ಬಟ್ಟೆಗಿಂತಲೂ ಅಗ್ಗವಾಗುವದು. ಏಕೆಂದರೆ ಗಿರಣಿ ಬಟ್ಟೆ ಬಳಸುವನ ಕೈಗೆ ಬಂದು ಮುಟ್ಟಬೇಕಾದರೆ ನಡುವೆ ಆಗುವ ವೆಚ್ಚಗಳೆಷ್ಟೋ ಉಳಿಯುವವು. ಹೀಗೆ ಉಳಿಯುವ ವೆಚ್ಚಗಳಲ್ಲಿ, ಗಿರಣಿಗಳ ಲಾಭಾಂಶ, ಹಂಚುವವನು ಮಾಡಿಕೊಳ್ಳುವ ಲಾಭ, ಹತ್ತಿ ಬಟ್ಟೆಗಳೆರಡರ ಹೋಗುವ ಬರುವ ಎರಡೂ ವೆಚ್ಚ, ಮೇಲ್ವಿಚಾರಣೆ ವ್ಯವಸ್ಥಾಪನೆಯ ವೆಚ್ಚ ಮತ್ತು ಬಡ್ಡಿ ಹಾಗು ಸವಕಳಿ ಇವುಗಳನ್ನು ಉಲ್ಲೇಖಿಸಬಹುದು. ನೂಲಿನ ವರೆಗಿನ ಎಲ್ಲ ದುಡಿಮೆಯೂ ಉಚಿತವಾಗಿರುವದರಿಂದಲೂ ನೇಯುವ ಕೂಲಿ ಕೂಡ ರೊಕ್ಕದ ರೂಪದಲ್ಲಿಲ್ಲದೆ ವಿನಿಮಯ ರೂಪದಲ್ಲಿ ಸಲ್ಲುವದರಿಂದಲೂ ಈ ಸ್ಥಿತಿಯಲ್ಲಿ ಶಾಂತಿಕಾಲದಲ್ಲಿ ಹುಟ್ಟಿಸಿದ ಬಟ್ಟೆಕೂಡ ಗಿರಣಿಯ ಬಟ್ಟೆಗಿಂತ ಅಗ್ಗವಾಗಬಹುದು. ಬಡದೇಶಕ್ಕೆ ಬೇಕಾದುದು ದುಡಿಮೆ ಉಳಿಸುವ ಉಪಾಯವಲ್ಲ; ಬಂಡವಲು ಉಳಿಸುವ ಹಾಗು ಲಾಭ ಉಳಿಸುವ ಹಾದಿ. ಹಾಗು ಯೋಜನೆ ತೋರಿಸುತ್ತದೆ.

"ಮೇಲಿನ ಯೋಜನೆಯನ್ವಯ" ಹಳ್ಳಿಯ ಪಂಚರ ಮೇಲ್ವಿಚಾರಣೆಯಲ್ಲಿ ಹೊರಗಿನವರ ಯಾವ ಹಸ್ತಕ್ಷೇಪವೂ ಇಲ್ಲದ ಸಹಕಾರವೂ ಪೂರ್ಣ ಸ್ವರಾಜ್ಯವೂ ಇರುವದಿಷ್ಟೇ ಅಲ್ಲ. ಈ ದೇಶದಲ್ಲಿ ಆಗಬೇಕೆಂದು ನಾವೆಲ್ಲರೂ ಬಯಸುವ ಬಗೆಯ ಆರ್ಥಿಕ ಕ್ರಾಂತಿಯ ಬೀಜಾರೋಪಣವೂ ಆಗುವದೆಂದು ನಮ್ಮ ಮುಂದಾಳುಗಳು ಗಮನಿಸಬೇಕು. ನಮ್ಮ ನಿಮ್ಮಷ್ಟೇ ಬಲ್ಲಿದರಾದ ಲಕ್ಷಾಂತರ ಗಂಡಸು—ಹೆಂಗಸರಿಗೆ ಇಡೀ ವರ್ಷಕ್ಕೆ ಬೇಕಾದಷ್ಟು ಕೆಲಸ ಸಿಗುವದಿಲ್ಲ. ಅವರು ಅರಿಯಲಾರದ ಒಂದು ಶಕ್ತಿ ಅವರ ಜೀವನದ ಮಟ್ಟವನ್ನು ದಿನೇ ದಿನೇ ಕೆಳತಳ್ಳುತ್ತಿದೆ. ಉದಾರ ದಾನದಿಂದ ಅವರ ಅವಸ್ಥೆ ಸುಧಾರಿಸಬಹುದು ನಿಜ. ಆದರೆ ಅದರಿಂದ ಅವರು ಗತಿಗೇಡಿಗಳೂ ಸ್ವಾಭಿಮಾನ ಶೂನ್ಯರೂ ಆಗದಿರರು. ಇಲ್ಲಿ ಮುಂದೊಡ್ಡಿದ ಯೋಜನೆಯಿಂದಲೇ ಅವರು ತಮ್ಮ ಸ್ವಂತ ದುಡಿಮೆಯಿಂದ ತಮಗಾಗಿಯೆ ಏನೋ ಒಂದಿಷ್ಟು ಹುಟ್ಟಿಸಿಕೊಂಡ ಸಂತುಷ್ಟಿಯನ್ನು ಪಡೆಯಬಲ್ಲರು. ಅದರಿಂದ ಅವರ ಅಭಿಮಾನಕ್ಕೆ ನೋವಾಗದು. ಇದಕ್ಕಾಗಿ ಸರಕಾರ ಮಾಡಬೇಕಾದ ಸಲಾ ವೆಚ್ಚ ಲೇಶಮಾತ್ರ; ಪ್ರಜಾಗಣದ ಇತರ ವರ್ಗಗಳ ಸೌಕರ್ಯ ಸೌಖ್ಯಗಳಿಗಾಗಿ ವೆಚ್ಚ ಮಾಡುತ್ತಿರುವ ಇತರ ಮೊತ್ತಗಳಿಗಿಂತ ಎಷ್ಟೋ ಕಡಿಮೆ. ಈ ಯೋಜನೆಯಲ್ಲಿ ಇನ್ನೊಂದು ಗುಣವಿದೆ. ಕೆಲವೊಂದು ಹಳ್ಳಿಯಲ್ಲಿ ಅದು ಬಹಳ ಬೇಗ ರೂಢವಾಗಿ ಒಂದೇ ತಿಂಗಳಲ್ಲಿ ಅವರು ಇನ್ನೊಂದುಮೂಟೆ ಹತ್ತಿ ಬೇಡಬಹುದು. ಹೀಗೆ ಅದು ಸ್ವಯಂಚಾಲಿತವಾಗುವದು. ಬೇರೆ ಕೆಲ ಹಳ್ಳಿಗಳಿಗೆ ಮೂರು ನಾಲ್ಕು ತಿಂಗಳು ಹಿಡಿದೀತು. ಕೆಲವು ಹಳ್ಳಿಗಳಂತೂ ಕೆಲವೇ ತಿಂಗಳುಗಳಲ್ಲಿ ಈ ರೀತಿಯಲ್ಲಿ ತಮ್ಮ ಸ್ವಂತ ಅವಶ್ಯಕತೆಗಳನ್ನೆಲ್ಲ ಪೂರೈಸಿಕೊಂಡು ಅಲ್ಪಸ್ವಲ್ಪ ಹೊರಗೆ ಕೊಡಲು ಕೂಡ ಸಮರ್ಥರಾಗಬಹುದು. ಅಂಥ ಪ್ರಸಂಗಗಳಲ್ಲಿ ಉತ್ಪಾದಕ ಹಳ್ಳಿಯ ಅವಶ್ಯಕತೆಗೆ ಹೆಚ್ಚಾಗಿ ಉಳಿಯಿತೆಂದರೆ ಅದನ್ನು ನಗರಗಳಲ್ಲಿ ಜನಸಾಮಾನ್ಯಕ್ಕೆ ಮಾರಲು-ಕಳಿಸುವದರಲ್ಲಿ ಏನೂ ಅನೌಚಿತ್ಯವಿಲ್ಲೆಂದು ನನ್ನೆಣಿಕೆ. ಆದರೆ ವೈಯಕ್ತಿಕ ಶೋಷಣೆಗೆ ಎಲ್ಲಿಯಾದರೂ ಅವಕಾಶ ಕೊಟ್ಟರೆ ಇಡಿ ಯೋಜನೆಯೆ ಕುಸಿದು ಬಿದ್ದೀತೆಂದು ನಾನು ಮೊದಲೇ ಎಚ್ಚರಿಸಿ ಬಿಡುತ್ತೇನೆ. ಉಳಿತಾಯವಾದುದನ್ನು ಹಳ್ಳಿಯೇ ಸಾಮೂಹಿಕವಾಗಿ ವ್ಯವಸ್ಥಿತಗೊಳಿಸಬೇಕು. ಹತ್ತಿಗಂಟನ್ನು ಹಳ್ಳಿಗೆ ಮುಟ್ಟಿಸುವ ಸರಕಾರಿ ಖಾತೆಯೇ ಅದನ್ನು ನಗರಗಳಿಗೆ ಒಯ್ಯಬೇಕು. ಅಲ್ಲದೆ ಸರಕಾರಿ ಚಿಲ್ಲರೆ ಅಂಗಡಿಗಳಲ್ಲಿ ಹೊರತು ಬೇಕಾದ ಮಾರ್ಗದಿಂದಲೂ ಅದನ್ನು ಮಾರಕೂಡದು. ಅರ್ಥಾತ್ ಮಧ್ಯಸ್ಥನಿಗೆ ಈ ಯೋಜನೆಯಲ್ಲಿ ಕೈಯಿಕ್ಕಲು ಆಸ್ಪದವೇ ಇರಕೂಡದು. ಇಲ್ಲವಿದ್ದರೆ ಅವನು ಎಷ್ಟೋ ಕೈಗಾರಿಕೆಗಳನ್ನೂ ಹಿಂದುಸ್ಥಾನದಲ್ಲಿದ್ದ ಇನ್ನೆಷ್ಟೊ ಒಳಿತುಗಳನ್ನೂ ಹಾಳುಗೆಡಹಿದಂತೆ ಇದನ್ನೂ ಹಾಳುಗೆಡಹುವನು."

ಗುಜರಾಥಿಯಲ್ಲಿ ಬರೆದ ಇನ್ನೊಂದು ಪತ್ರದಲ್ಲಿ ಮನು ಸುಬೇದಾರರು ಹೇಳುತ್ತಾರೆ:

"ನನ್ನ ಯೋಜನೆ ಸ್ವೀಕೃತವಾಗದಿದ್ದಲ್ಲಿ ಹೆಣ್ಣುಮಕ್ಕಳು ಬಟ್ಟೆಯ ಅಭಾವಕ್ಕಾಗಿ ಮನೆಯೊಳಗೇ ಉಳಿಯುವ ವಿಷಾದಜನಕ ಪರಿಸ್ಥಿತಿ ಒದಗಬಹುದು.

"ಗಿರಣಿಯೊಡೆಯರೂ ಮಧ್ಯಸ್ಥರೂ ತೋರಿಸುತಿರುವ ಕಲ್ಮಷವು ನಾನು ಸೂಚಿಸಿದಂಥ ಯಾವೊಂದು ಉಪಶಮನವನ್ನು ಅವಶ್ಯವಾಗಿ ಮಾಡಿದೆ.

"ಉಪ್ಪಿನ ತೆರಿಗೆಯನ್ನು ಕಿತ್ತುಹಾಕಿದರೆ ಲಕ್ಷಾಂತರ ಹಳ್ಳಿಗರಿಗೆ ನಮ್ಮ ಸರಕಾರದ ಕೈಲೆ ಆಡಳಿತ ಸೂತ್ರಗಳು ಬಂದಿವೆಯೆಂದು ಮನದಟ್ಟಾಗುವದೆಂಬದಾಗಿ ನೀವು ಸರಿಯಾಗಿಯೆ ಹೇಳಿದ್ದೀರಿ. ತುಸು ಸಹಕಾರಿ ದುಡಿಮೆಯಿಂದ ಏನೂ ಕಷ್ಟವಿಲ್ಲದೆ ತಮ್ಮ ಬಟ್ಟೆಬರೆಯನ್ನು ಮಾಡಿಕೊಳ್ಳಲನುಕೂಲವಾಗುವಂತೆ ಸರಕಾರ ಹತ್ತಿಯನ್ನು ಅತಿ ಸುಲಭ ಶರ್ತುಗಳ ಮೇಲೆ ಹಳ್ಳಿಯ ಬಾಗಿಲಿಗೆ ತಂದೊದಗಿಸುವದನ್ನು ಕಂಡರೆ ತಮ್ಮ ಸರಕಾರ ಬಂದಿರುವದು ಅವರಿಗೆ ಇನ್ನಷ್ಟು ಖಚಿತವಾಗದೆ?"

ಹೊಸದಿಲ್ಲಿ —ಮೋ. ಕ. ಗಾಂಧಿ
೨೩—೧೦—೪೬

---

ಮಹಾತ್ಮರ ಒಬ್ಬೊಂಟಿಗ ಜೀವನದ ಮೊದಲನೆ ದಿನದ ಅನುಭವ ಕೆಲಮಟ್ಟಿಗೆ ಪ್ರಯಾಸಕರವಾಗಿದ್ದಿತು. ಅವಶ್ಯಕ ವಸ್ತುಗಳು ಅನೇಕ ಸಲ ಕಾಣುತಿರಲಿಲ್ಲ; ಸಕಾಲಕ್ಕೆ ಸಿಕ್ಕುತಿರಲಿಲ್ಲ. ನಿರ್ಮಲಕುಮಾರ ಮತ್ತು ಪರಶುರಾಮರು ಅವರ ಸಂಗಡ ಇದ್ದರೂ ಅವರಿಗೆ ಬೇರೆ ಕೆಲಸವನ್ನೆ ಕೊಟ್ಟಿರುವರು.

ಶಮಸುದ್ದೀನ ಅಹಮ್ಮದ ಮತ್ತು ಈ ಭಾಗದಲ್ಲಿ ಸಂಚರಿಸುತಿದ್ದ ಅ. ಭಾ. ದಲಿತವರ್ಗದ ಕಾರ್ಯದರ್ಶಿ ಪಿ. ಎನ್. ರಾಜಭೋಜರು ಗಾಂಧಿಜಿಯವರನ್ನು ಕಂಡರು.

# ಪರಿಸ್ಥಿತಿ ಬದಲಾಗದಿದ್ದರೆ ಪ್ರಚಂಡ ಹೋರಾಟ ಅನಿವಾರ್ಯ

## ಕಾಂಗ್ರೆಸ್ ವಿಷಯನಿಯಾಮಕ ಸಮಿತಿಯಲ್ಲಿ ಜವಾಹರರ ಹೇಳಿಕೆ

## ಕಾಂಗ್ರೆಸ್ ಅಧಿವೇಶನ ಪ್ರಾರಂಭ

ಮಿರತ ಕಾಂಗ್ರೆಸ್ ಅಧಿವೇಶನ ಆಚಾರ್ಯ ಕೃಪಲಾನಿಯವರ ಅಧ್ಯಕ್ಷತೆಯಲ್ಲಿ ೨೩ ನೇ ದಿನಾಂಕ ಪ್ರಾರಂಭವಾಯಿತು. ೧೮೫೭ ನೆಯ ಇಸ್ವಿಯಲ್ಲಿ ಹೂಡಿದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದ ಸ್ಥಳವಾಗಿದ್ದ ಮಿರತದಲ್ಲಿಯೆ ಈ ಅಧಿವೇಶನ ಕೂಡಿದ್ದು ಯೋಗಾಯೋಗವಾಗಿದೆ. ಸದ್ಯದ ಅಧಿವೇಶನದ ಸ್ಥಳದಲ್ಲಿಯೆ ಇದ್ದ ತುರಂಗದಿಂದ ಹೊರಬಿದ್ದು ಕೈದಿಗಳು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಸೇರಿದ್ದರು. ಏಳು ವರುಷಗಳ ನಂತರ ಈ ಅಧಿವೇಶನ ಸೇರಿದ್ದರಿಂದ ಇದಕ್ಕೆ ಅತ್ಯಂತ ಮಹತ್ವ ಪ್ರಾಪ್ತವಾಗಿದೆ. ಮಹಾತ್ಮಾ ಗಾಂಧಿಯವರು ಈ ಅಧಿವೇಶನಕ್ಕೆ ಬರುವುದಿಲ್ಲ. ಮಹಾತ್ಮರು ಉಪಸ್ಥಿತರಿಲ್ಲದ ಕಾಂಗ್ರೆಸ್ ಅಧಿವೇಶನ ಇತ್ತೀಚಿಗೆ ಕೂಡಿಯೆ ಇಲ್ಲೆಂದು ಹೇಳಬಹುದು. ಕಾಂಗ್ರೆಸ್ ಮಂಡಪದಲ್ಲಿ ೬೫ ಸಾವಿರ ಜನರಿಗೆ ಕೂಡ್ರುವ ವ್ಯವಸ್ಥೆಯಿದ್ದಿತು. ಆದರೆ ಜಾತೀಯ ದೊಂಬಿಯ ನಿಮಿತ್ತ ಕೇವಲ ಪ್ರತಿನಿಧಿಗಳು, ಶಾಸನಸಭಾ ಸದಸ್ಯರಿಗೆ ಮಾತ್ರ ಪ್ರವೇಶ ಕೊಡಲಾಗಿದೆ. ವಿಷಯನಿಯಾಮಕ ಸಮಿತಿಗೆಂದು ಲಚಿಸಲ್ಪಟ್ಟಿದ್ದ ಮಂಟಪದಲ್ಲಿಯೆ ಈಗ ಬಹಿರಂಗ ಅಧಿವೇಶನ ಸೇರುವದು. ಸುಮಾರು ೧೨ ಸಾವಿರಜನ ಅಲ್ಲಿ ಕೂಡುವರು. ಶಾಂತಿನಿಕೇತನದ ಕಲಾಕುಶಲರು ಖಾದಿಯಿಂದಲ್ಲಿಯೆ ಮಂಡಪವನ್ನು ಸುಶೋಭಿತಗೊಳಿಸಿರುವರು. ಅಧ್ಯಕ್ಷರ ವ್ಯಾಸಪೀಠದ ಹಿಂದೆ ಮಹಾತ್ಮರ ಭಾವಚಿತ್ರವನ್ನು ತೂಗು ಹಾಕಿದ್ದು "ಕರುಣಾಳು ಬಾ ಬೆಳಕೆ" ಎಂಬದಾಗಿ ಬರೆದಿದೆ. ಕಸ್ತುರಬಾ, ಸುಭಾಷಚಂದ್ರ ಬೋಸ, ಲೋಕಮಾನ್ಯ ಟಿಳಕ, ಝಾಂಶಿ ರಾಣಿ ಮೊದಲಾದವರ ಭಾವಚಿತ್ರಗಳು ಮಹಾದ್ವಾರವನ್ನು ಅಂದಗೊಳಿಸುತಿರುವವು.

### ಕಾಂಗ್ರೆಸ್ ಕಾರ್ಯ ಸಮಿತಿ

ಕಾಂಗ್ರೆಸ್ ಕಾರ್ಯ ಸಮಿತಿ ೨೦ ನೇ ತಾರೀಕು ಕೂಡಿ ಪಂಡಿತ ಮಾಲವೀಯವರ ನಿಧನದ ಬಗ್ಗೆ ದುಃಖ ಪ್ರದರ್ಶಿಸುವ ಗೊತ್ತುವಳಿ ಪಾಸ ಮಾಡಿತು. ಬಿಹಾರ ಗಲಭೆ, ದಕ್ಷಿಣ ಅಫ್ರಿಕೆಯ ಭಾರತೀಯರ ಸತ್ಯಾಗ್ರಹ, ಘಟನಾಸಮಿತಿ ಮೊದಲಾದವುಗಳ ಬಗ್ಗೆ ಗೊತ್ತುವಳಿ ಸ್ವೀಕರಿಸಿತು. ಸಂಪೂರ್ಣ ಅಧಿಕಾರವಿದ್ದ ಸ್ವತಂತ್ರ ಹಿಂದುಸ್ತಾನವನ್ನು ಸ್ಥಾಪಿಸುವದೆ ಕಾಂಗ್ರೆಸ್ಸಿನ ಗುರಿಯೆಂದು ಸಾರಿ ಕಾಂಗ್ರೆಸ್ಸಿಗರು ಈ ದಿಸೆಯಲ್ಲಿ ಪ್ರಯತ್ನಿಸಬೇಕೆಂದು ಘಟನಾ ಸಮಿತಿಯ ಗೊತ್ತುವಳಿಯಲ್ಲಿ ಹೇಳಲಾಗಿದೆ. ಬಿಹಾರ ಗಲಭೆಯ ಗೊತ್ತುವಳಿಯಲ್ಲಿ ಅಲ್ಲಿನ ಅತ್ಯಾಚಾರಗಳನ್ನು ಸಂಪೂರ್ಣವಾಗಿ ಖಂಡಿಸಿ ಕಷ್ಟಕ್ಕೊಳಗಾದವರಿಗೆ ಸಹಾನುಭೂತಿಯನ್ನು ವ್ಯಕ್ತಗೊಳಿಸಲಾಗಿದೆ. ಸೇಡಿನ ಬುದ್ಧಿಯನ್ನಿಟ್ಟುಕೊಂಡು ಒಂದು ತಪ್ಪಿಗೆ ಇನ್ನೊಂದು ತಪ್ಪು ಮಾಡುವದು ಮೂರ್ಖತನದ್ದೆಂದೂ ಅದರಿಂದ ರಾಜಕೀಯ ಉದ್ದೇಶ ಸಾಧಿಸಲಾರದೆಂದೂ ಜನತೆಗೆ ಎಚ್ಚರಿಕೆ ಕೊಡಲಾಗಿದೆ.

### ವಿಷಯ ನಿಯಾಮಕ ಸಮಿತಿ

ಕಾಂಗ್ರೆಸ ವಿಷಯ ನಿಯಾಮಕ ಸಮಿತಿಯ ಸಭೆ ೨೦ ನೇ ದಿನ ಪಂಡಿತ ಜವಾಹರಲಾಲರ ಅಧ್ಯಕ್ಷತೆಯಲ್ಲಿ ಪ್ರಾರಂಭವಾಯಿತು. ನಿಯೋಜಿತ ಅಧ್ಯಕ್ಷರಾದ ಆಚಾರ್ಯ ಕೃಪಲಾನಿಯವರಿಗೆ ಜವಾಹರರು ಅಧಿಕಾರ ಒಪ್ಪಿಸಿಕೊಟ್ಟರು. ಕೃಪಲಾನಿಯವರು ಪ್ರಾಸ್ತಾವಿಕ ಭಾಷಣ ಮಾಡಿದ ನಂತರ ದುಃಖ ಸೂಚಕ ಗೊತ್ತುವಳಿ ಸ್ವೀಕೃತವಾಯಿತು.

ಕಾಂಗ್ರೆಸ ಕಾರ್ಯ ಸಮಿತಿ ಮತ್ತು ಅ. ಭಾ. ಕಾಂಗ್ರೆಸ ಸಮಿತಿಯು ನಡುಗಾಲ ಸರಕಾರವನ್ನು ರಚಿಸಬೇಕೆಂದು ಮುಂತಾಗಿ ಕಾಲಕಾಲಕ್ಕೆ ಸ್ವೀಕರಿಸಿದ ಗೊತ್ತುವಳಿಗಳಿಗೆ ಕಾಂಗ್ರೆಸ್ಸು ಮನ್ನಣೆಯನ್ನು ಕೊಡಬೇಕೆಂದು ಮೌಲಾನಾ ಅಬುಲಕಲಂ ಅಝಾದರು ಮಂಡಿಸಿದ ಗೊತ್ತುವಳಿಯು ಮೇಲೆ ತೀಕ್ಷ್ಣ ಚರ್ಚೆಯಾಗಿ ಪ್ರಚಂಡ ಬಹುಮತದಿಂದ ಅದು ಸ್ವೀಕೃತವಾಯಿತು. ಕೇವಲ ೩೦ ಜನರು ವಿರುದ್ಧ ಮತ ಕೊಟ್ಟರು.

### ಪಂಡಿತ ಜವಾಹರಲಾಲರು

ಘಟನಾ ಸಮಿತಿಯನ್ನು ಕರೆಯುವಾಗ ಕಾಂಗ್ರೆಸ್ಸು ಸ್ವತಂತ್ರ ಸಾರ್ವಭೌಮ ಪ್ರಜಾಪ್ರಭುತ್ವವನ್ನು ಸ್ಥಾಪಿಸುವ ಧ್ಯೇಯವನ್ನಿಟ್ಟುಕೊಂಡಿದೆ ಎಂಬ ಗೊತ್ತುವಳಿಯನ್ನು ಪಂಡಿತ ಜವಾಹರಲಾಲರು ಮಂಡಿಸಿದರು. ಈ ಸಂಬಂಧದಲ್ಲಿ ಭಾಷಣ ಮಾಡುತ್ತ ಜವಾಹರಲಾಲರು ಹೀಗೆ ಹೇಳಿದರು.

"ಮುಸ್ಲಿಂ ಲೀಗು ನಡುಗಾಲ ಸರಕಾರವನ್ನು ಸೇರಿದಂದಿನಿಂದ ಅಲ್ಲಿಯ ವಾತಾವರಣವು ತೀರ ಆಯಾಸಕರವಾದ್ದರಿಂದ ನಾವು ರಾಜೀನಾಮೆ ಕೊಡುವದಾಗಿ ಕಾಂಗ್ರೆಸ ಮಂತ್ರಿಗಳು ಎರಡು ಸಲ ಹೆದರಿಸಬೇಕಾಯಿತು. ನಮ್ಮ ತಾಳ್ಮೆಯ ಕೊನೆ ಮರ್ಯಾದೆಯನ್ನು ಮುಟ್ಟುತಿದೆ ಈ ಸಂಗತಿಗಳು ಹೀಗೆಯೇ ನಡೆದರೆ ದೊಡ್ಡ ಪ್ರಮಾಣದಲ್ಲಿ ಹೋರಾಟ ಅನಿವಾರ್ಯವಾಗಿ ಪ್ರಾರಂಭವಾಗುವದು.

'ವಾಯಿಸರಾಯರು ನಡುಗಾಲ ಸರಕಾರವನ್ನು ಸ್ಥಾಪಿಸಿದ ಬುದ್ಧಿಯಿಂದಲೆ ಈಗ ಅದನ್ನು ನಡೆಸಿಕೊಂಡುಹೋಗುತಿರುವದಿಲ್ಲ. ಅವರು ಆಡಳಿತದ ಚಕ್ರಗಳನ್ನು ಒಂದೊಂದಾಗಿ ಕಿತ್ತುತಿದ್ದಾರೆ. ಇದರಿಂದ ಭಯಂಕರ ಪರಿಸ್ಥಿತಿ ನಿರ್ಮಾಣವಾಗುವದು.

ಲೀಗು ನಡುಗಾಲ ಸರಕಾರದಲ್ಲಿ ಸೇರಿದಂದಿನಿಂದ ಬ್ರಿಟಿಶರ ಬೆಂಬಲ ದೊರಕಿಸಲು ಪ್ರಯತ್ನಿಸುತಿದೆ. ನಡುಗಾಲ ಸರಕಾರದಲ್ಲಿಯ ನಮ್ಮ ಮತಭೇದಗಳನ್ನು ನಮ್ಮಲ್ಲಿಯೇ ಬಗೆಹರಿಸಿಕೊಳ್ಳಬೇಕು. ವೈಸರಾಯರ ಮಧ್ಯಸ್ತಿಕೆಯನ್ನು ಬಯಸಬಾರದೆಂದು ನಾನು ಬ್ಯಾ. ಜಿನ್ನಾರಿಗೆ ಸೂಚಿಸಿದ್ದೆ. ಬ್ಯಾ. ಜಿನ್ನಾ ಆ ಸೂಚನೆಯನ್ನು ಸಂಪೂರ್ಣವಾಗಿ ತಿರಸ್ಕರಿಸಲಿಲ್ಲ. ಆದರೆ ಲೀಗು ಮಂತ್ರಿಮಂಡಳದಲ್ಲಿ ಸೇರಿದ ಕೂಡಲೆ ಸರಕಾರದಲ್ಲಿ 'ಅರಸರ ಪಕ್ಷ'ವೆಂದು ತಳವೂರುವ ಪ್ರಯತ್ನ ನಡೆಸಿದೆ. ಬ್ರಿಟಿಶ ಸರಕಾರ ಈ ಮತಭೇದವನ್ನು ತನ್ನ ಸಾರ್ಥಕ್ಕಾಗಿ ಉಪಯೋಗಿಸಿಕೊಳ್ಳುತ್ತದೆ. ಲೀಗು ಮತ್ತು ಬ್ರಿಟಿಶ್ ಹಿರಿಯ ಅಧಿಕಾರಿಗಳಲ್ಲಿ ಮಾನಸಿಕ ಮೈತ್ರಿಯಿದೆ.

ಬ್ಯಾ. ಜಿನ್ನಾ ವೈಸರಾಯರಿಗೆ ಇದೆ ೧೭ನೇ ತಾರೀಕು ಬರೆದ ಪತ್ರದ ಪ್ರಕಾರ ಮೇ ೧೬ ರ ಘೋಷಣೆಯನ್ನು ಒಪ್ಪದಿದ್ದರೆ ನಡುಗಾಲ ಸರಕಾರದಲ್ಲಿ ಲೀಗಿನ ಪ್ರತಿನಿಧಿಗಳಿಗೆ ಅವಕಾಶ ದೊರೆಯಲಾರದು. ಘಟನಾ ಸಮಿತಿಗೆ ನಾವು ಲೀಗಿನ ಪ್ರತಿನಿಧಿಗಳನ್ನು ಸ್ವಾಗತಿಸುತಿದ್ದೇವೆ. ಅವರು ಬರಲಿ ಬಿಡಲಿ, ನಮ್ಮ ಕಾರ್ಯವೇನೂ ನಿಲ್ಲಲಾರದು. ಅನಿಯಮಿತ ಅವಧಿಯ ವರೆಗೆ ಘಟನಾ ಸಮಿತಿಯನ್ನು ಮುಂದೂಡಬೇಕೆಂದು ಬ್ಯಾ. ಜಿನ್ನಾರು ಕೇಳಿದ್ದಾರೆ. ಆದರೆ ಘಟನಾಸಮಿತಿಯನ್ನು ಕೆಲ ತಿಂಗಳಾದರೂ ಮುಂದೂಡಿದರೆ ಅದು ಸೇರುವದಿಲ್ಲೆಂದೇ ಅದರ ಅರ್ಥ.

ಕಾಂಗ್ರೆಸು ಪೂರ್ಣ ಸಾಮರ್ಥ್ಯದಿಂದ ಸುಸಂಘಟಿತವಾಗಿ ಘಟನಾಸಮಿತಿಯನ್ನು ಪ್ರವೇಶಿಸುವದು. ಚಿಕ್ಕ ಪುಟ್ಟ ಸಂಗತಿಗಳ ಬಗ್ಗೆ ವಾಗ್ಯುದ್ಧ ನಡೆಸಲು ನಾವಲ್ಲಿಗೆ ಹೋಗುತಿರುವದಿಲ್ಲ. ಆದರೆ ಭಾರತದಲ್ಲಿ ಪ್ರಜಾ ಪ್ರಭುತ್ವ ಸ್ಥಾಪಿಸಲು ಹೋಗುತಿದ್ದೇವೆ ಎಂದು ಮುಂತಾಗಿ ಹೇಳಿದರು.

## ಗ್ರೀನ ಕ್ರಾಸ ಸೊಸಾಯಿಟಿ

ರೆಡ್‌ಕ್ರಾಸ ಸೊಸಾಯಿಟಿ ಎಲ್ಲರಿಗೂ ಪರಿಚಿತವಿದೆ. ಒಂದು ಕಾಲಕ್ಕೆ ಅದು ಕೇವಲ ಮಿಲಿಟರಿಗೆ ಸಂಬಂಧಿಸಿದ ಸಂಸ್ಥೆಯಾಗಿತ್ತು. ಕೇವಲ ಸಾಮ್ರಾಜ್ಯತ್ವದ ಅಸ್ವಾನ ಅದಕ್ಕಿದ್ದಿತು. ಅದರೀಗ ಅದರ ಕ್ಷೇತ್ರ ವ್ಯಾಪಕವಾಗಿದೆ. ನಾಗರಿಕರ ಕಾರ್ಯವನ್ನೂ ಅದು ಮಾಡಹತ್ತಿದೆ. ಬಳಲುತಿರುವ ಮಾನವ ಜನಾಂಗದ ಪರಿಹಾರ ಕಾರ್ಯದಲ್ಲಿ ಎಲ್ಲ ಬಗೆಯ ಪ್ರಥಮ ಚಿಕಿತ್ಸೆಯನ್ನು ಅದು ಕೈಕೊಳ್ಳುತ್ತದೆ. ಆದರೂ ಅದರ ಚಟುವಟಿಕೆಗಳು ಹೆಚ್ಚಾಗಿ ನಗರಗಳಲ್ಲಿಯೆ ನಡೆಯುತಿವೆ. ಹಿಂದೀ ಜೀವನವನ್ನು ಅದು ಕ್ವಚಿತ್ತಾಗಿ ಮುಟ್ಟಿದೆ.

ಅಯಶಸ್ವೀ ಧ್ಯೇಯಗಳಿಗೆ ಅವು ಮಾನವೀಯವಿರಲಿ ಇಲ್ಲವೆ ವಿಚಿತ್ರ ಧ್ಯೇಯವಾಗಿರಲಿ—ಇಂಗ್ಲಂಡ ಪ್ರಸಿದ್ಧ ರಾಷ್ಟ್ರವಾಗಿದೆ. ವನ್ಯ ಪಶುಗಳಿಗಾಗಿ ಇಂಥದೊಂದು ಗ್ರೀನಕ್ರಾಸ್ ಸೊಸಾಯಿಟಿ ಅಲ್ಲಿದೆ. ಶ್ರೀಮತಿ ಎಂ. ಎಚ್. ಮಾರಿಸನ್ ಇವರು ಅದರ ಗೌರವ ಕಾರ್ಯದರ್ಶಿಗಳು (ಅವರ ವಿಳಾಸ 41 Asmuns place London N. W. 11)

ಯುಕ್ತರಾಷ್ಟ್ರ ಸಂಘ ತಮ್ಮ ಈ ಸಂಘಕ್ಕೆ ಮನ್ನಣೆ ಕೊಟ್ಟು ಸಂಬಂಧ ಬೆಳಸಿಕೊಳ್ಳಬೇಕೆಂದು ಈ ಸಂಘದ ಗುರಿಯಾಗಿದೆ. ಯುಕ್ತರಾಷ್ಟ್ರ ಸಂಘಕ್ಕೆ ಈ ಕೆಳಗಿನ ಗೊತ್ತುವಳಿಯನ್ನು ಕಳಿಸಬೇಕೆಂದು ಸಂಘ ಗೊತ್ತುಪಡಿಸಿದೆ.

"(ಅ) ಅಮೂಲ್ಯ ಮತ್ತು ವನ್ಯಪ್ರಾಣಿಗಳ ರಕ್ಷಣೆಗೆ ಅವಶ್ಯವಾದ ನೈಸರ್ಗಿಕ ಹೂಬಳ್ಳಿ ಗಿಡಗಳಿಂದ ಯುಕ್ತವಾದ ಯೋಗ್ಯ ರಾಷ್ಟ್ರೀಯ ಉದ್ಯಾನದ ಕ್ಷೇತ್ರವನ್ನು ಪ್ರತಿಯೊಂದು ರಾಷ್ಟ್ರದಲ್ಲಿ ಮರ್ಯಾದಿತಗೊಳಿಸುವದಕ್ಕಾಗಿ ಕೂಡಲೆ ಪ್ರಯತ್ನ ಕೈಕೊಳ್ಳಬೇಕಾದುದು ಯುಕ್ತರಾಷ್ಟ್ರ ಸಂಘದ ಧ್ಯೇಯಗಳಲ್ಲಿ ಒಂದಾಗಿರಬೇಕು. ದಕ್ಷಿಣ ಅಮೇರಿಕೆಯಲ್ಲಿ, ಆಫ್ರಿಕೆಯಲ್ಲಿ ಇಲ್ಲವೆ ಏಶಿಯದಲ್ಲಿ ಅಂತರ್‌ರಾಷ್ಟ್ರೀಯ ಉದ್ಯಾನವನ್ನು ಏರ್ಪಡಿಸಲು ಜಗತ್ತಿನಲ್ಲಿಯ ರಾಷ್ಟ್ರಗಳು ಒಪ್ಪತಕ್ಕದ್ದು. ಏಶಿಯದಲ್ಲಿ ರಚಿಸಲ್ಪಡುವದಾದರೆ ತಿಬೇಟದ ಸುತ್ತಲೂ ಪ್ರಚಂಡ ಪರ್ವತದ ಮೇಲೆ ಆ ಉದ್ಯಾನವನ್ನು ಮಾಡತಕ್ಕದ್ದು. ಬ್ರಿಟನ್, ಚೀನ, ಹಿಂದುಸ್ತಾನ, ರಶಿಯ ಮತ್ತು ಅಮೇರಿಕೆ ರಾಷ್ಟ್ರಗಳು ವಿಶ್ವಸ್ತರೆಂದು ಅದರ ಒಡೆಯರಾಗತಕ್ಕದ್ದು.

ಈ ಬಗೆಯ ಗೊತ್ತುವಳಿಯನ್ನು ಯುಕ್ತರಾಷ್ಟ್ರ ಸಂಘ ಏಕೆ ಸ್ವೀಕರಿಸಬೇಕೆಂಬುದಕ್ಕೆ ಈ ಕಾರಣಗಳನ್ನು ಕೊಡಲಾಗುತ್ತದೆ.

೧) ಐಹಿಕ ಸುಖೋಪಭೋಗಗಳು ಲಾಲಸೆಯಿಂದ ನಡೆಯುತಿರುವ ಆಕ್ರಮಣದ ಹುಚ್ಚುಚ್ಚಾರವನ್ನು ತಡೆಯಲಿಕ್ಕೆ ಇದೀಗ ಉಪಾಯ ಕೈಕೊಳ್ಳಲಿಕ್ಕೆ ಬೇಕಾಗಿದೆ.

೨) ನಮ್ಮ ವನ್ಯ ಜೀವನದ ಸೌಂದರ್ಯ, ಮನೋಹರತೆ ಮತ್ತು ಹಿತಸಂಬಂಧ, ಪರಂಪರಾಗತ ಸೊತ್ತನ್ನು ರಕ್ಷಿಸಲು, ವನ್ಯ ಪಶುಗಳು ವನ್ಯಹೂಬಳ್ಳಿ ಗಿಡಗಳ ರಕ್ಷಣೆಗಾಗಿ ಮತ್ತು ಅರಣ್ಯ ಮತ್ತು ಭೂಪ್ರದೇಶದ ರಕ್ಷಣೆಗಾಗಿ ಒಟ್ಟಾರೆ ಶಕ್ಯವಿದ್ದಲ್ಲೆಲ್ಲ ನಮ್ಮ ಪರಂಪರಾಗತ ಸೊತ್ತನ್ನು ರಕ್ಷಿಸಲು ಇಡೀ ಜಗತ್ತಿಗೆ ಮತ್ತು ಪ್ರತಿಯೊಂದು ರಾಷ್ಟ್ರಕ್ಕೆ ಒತ್ತಾಯಪಡಿಸಬೇಕೆಂಬುದು ಯುಕ್ತ ರಾಷ್ಟ್ರ ಸಂಘದ ಧ್ಯೇಯ ಧೋರಣಗಳಲ್ಲಿ ಅಡಕವಾಗಿರತಕ್ಕದ್ದು. ರಾಷ್ಟ್ರೀಯ ಉದ್ಯಾನಗಳಲ್ಲಿಯ ಸೃಷ್ಟಿ ಸೌಂದರ್ಯವನ್ನು ಕಾಯ್ದುಕೊಳ್ಳುವುದಕ್ಕಾಗಿ ವಿಶೇಷ ದಕ್ಷತೆ ತೆಗೆದುಕೊಳ್ಳತಕ್ಕದ್ದು.

೩) ದಕ್ಷಿಣ ಅಮೇರಿಕೆ, ಅಫ್ರಿಕೆ ಇಲ್ಲವೆ ಏಶಿಯದಲ್ಲಿಯ ತನ್ನ ಸ್ವಂತ ಜಾಗತಿಕ ನೈಸರ್ಗಿಕ ಉದ್ಯಾನ ಇಲ್ಲವೆ ಅಂತರ್‌ರಾಷ್ಟ್ರೀಯ ಉದ್ಯಾನದ ಹಕ್ಕನ್ನು ಪ್ರಸ್ಥಾಪಿಸಿಕೊಂಡು ಸಂಯುಕ್ತ ರಾಷ್ಟ್ರಗಳು ಸಂಯುಕ್ತ ರೀತಿಯಿಂದ ಅಂತರ್‌ರಾಷ್ಟ್ರಗಳಿಗೆ ಉದಾಹರಣೆಯನ್ನು ಹಾಕಿಕೊಡತಕ್ಕದ್ದು. ಏಶಿಯದಲ್ಲಿ ಅದರೆ ತಿಬೇಟದ ಸುತ್ತಲಿರುವ ಪ್ರಚಂಡ ಕೊಪ್ಪಲದ ಮೇಲೆ ಅದರ ಸುತ್ತಲೂ ಆ ತೋಟವನ್ನು ರಚಿಸಬೇಕು. ಈ ಸಂದರ್ಭದಲ್ಲಿ ಬ್ರಿಟನ್, ಚೀನ, ಹಿಂದುಸ್ತಾನ, ರಶಿಯ ಮತ್ತು ಅಮೇರಿಕೆಯ ರಕ್ಷಕರನ್ನು ನೇಮಿಸಬೇಕು. ಘಾತಕ ಮತ್ತು ವಿನಾಶಕ ಸುಲಿಗೆಯನ್ನು ತಡೆಯುವದಕ್ಕಾಗಿ ವಿಶ್ವಸ್ತರಂತೆ ಕಾರ್ಯಸಾಗಿಸಬೇಕು.

೪) ಈ ದೂರದ ಧ್ಯೇಯದ ಮಾರ್ಗದಲ್ಲಿ ಗೆಳೆಯರು, ಸಹಾನುಭೂತಿಗರು ಮೊದಲಾದವರಿಗೆ ಇಂಥ ನೇತೃತ್ವ ಮತ್ತು ಸುಯೋಗವನ್ನು ಈ 'ದೂರದಿಗಂತ ಕೊಡಬಲ್ಲದಾಗಿದೆ."

ಈ ಗೊತ್ತುವಳಿಗೆ ಸಹಿ ಮಾಡಿದವರಲ್ಲಿ ಅಲ್ಫ್ರೆಡ್ ಜೆ. ಮುನಿಂಗ್ಸ, ಅಧ್ಯಕ್ಷ ರಾಯಲ್ ಆಕೆಡೆಮಿ ಆಫ್ ಆರ್ಟ್ಸ್, ಡೇಮ ಲಾರಾ ನಾಯಿಟ ಮತ್ತು ಜಗಪ್ರಸಿದ್ಧ ಜಿ. ಬರ್ನಾಡ ಶಾ ಇವರು ಇರುವರು.

ಪ್ರಮುಖ ಹಿಂದೀಯರು ಮತ್ತು ಏಶಿಯ ಅಫ್ರಿಕೆಗಳಲ್ಲಿಯ ಉಳಿದ ಮುಖಂಡರು ಇದಕ್ಕೆ ಸಹಿ ಹಾಕಬೇಕೆಂದು ಶ್ರೀಮತಿ ಮಾರಿಸನ್‌ರು ಅಪೇಕ್ಷಿಸುತ್ತಾರೆ. ಈ ಗೊತ್ತುವಳಿಯನ್ನು ಪುರಸ್ಕರಿಸುವವರು ಶ್ರೀಮತಿ ಮಾರಿಸನ್‌ರ ಕೂಡ ಪತ್ರವ್ಯವಹಾರ ಮಾಡಬೇಕು.

ಸೋದೇಪುರ ಮೋ. ಕ. ಗಾಂಧಿ
೨—೧೧—೧೯೪೬

## ಗಂಡನಿಗೋಸುಗ ಹೆಂಡತಿ ನೂಲುವದು

ಲಬ್ಧಪ್ರತಿಷ್ಠ ಪತ್ರಿಕೋದ್ಯಮಿಗಳಾದ ಪಂಡಿತ ಬನಾರಸಿದಾಸ ಚತುರ್ವೇದಿಯವರು ಬುಂದೇಲಖಂಡದ ಜನಪದ ಸಾಹಿತ್ಯದ ಸಂರಕ್ಷಣೆಗಾಗಿಯೂ ವಿಧಾಯಕ ಕಾರ್ಯಕ್ರಮದ ಪಾಲನೆಗಾಗಿಯೂ ಮೀಸಲಾದ "ಮಧುಕರ" ಎಂಬ ಉತ್ತಮ ಹಿಂದೀ ಪತ್ರಿಕೆಯನ್ನು [illegible]ಸುತ್ತಿದ್ದಾರೆ. "ಮಧುಕರ"ದ ೩ ನೆ ಸಂ[illegible] ೪ ನೆ ಸಂಚಿಕೆಯಲ್ಲಿ ಬುಂದೇಲಖಂಡದ [illegible] ಜನಪದ ಗೀತೆಯೊಂದನ್ನು "ಸ್ವತಂತ್ರ"ದಿಂದ ಎತ್ತಿ ಕೊಡಲಾಗಿದೆ. ದೂರದೇಶದಲ್ಲಿದ್ದವನ ಹೆಂಡತಿಯೊಬ್ಬಾಕೆ ತನ್ನ ಗೆಳತಿಗೆ ತನ್ನ ವಿರಹವ್ಯಥೆಯನ್ನು ಹೇಳಿಕೊಳ್ಳುವ ಆ ಹಾಡಿನ ಅಭಿಪ್ರಾಯವಿಂತಿದೆ.

ಅತ್ತಿಗೆಯ ತಮ್ಮನ ಕಾಣದೆ ನನ ಜೀವ
ಕೊರಗುತಲಿದೆ, ಗೆಳತಿ!
ಅವ ಮನೆಯಲಿದ್ದರೆ, ಅಂಗಳದೆ ನಾನು
ನನ ರಾಟೆ ತಿರುವುತಿದೆ—ಏ ಗೆಳತಿ
ನಯ ನೂಲು ತೆಗೆಯುತಿದ್ದೆ.
ನಯನೂಲ ತೆಗೆದು ನಾ ತಾವರೆಯಂದದ
ರುಮಾಲ ನೇಯ್ಸುತಿದ್ದೆ—ಏ ಗೆಳತಿ
ನಲ್ಲಗೊಪ್ಪಿಸುತಿದ್ದೆ.
ರುಮಾಲ ಸುತ್ತಿ ನಲ್ಲ ಅರಸನೋಲಗದೆ
ಚಂದದಿ ಮೆರೆಯುತಿದ್ದ—ಏ ಗೆಳತಿ
ಕಂಗಳ ಸೆಳೆಯುತಿದ್ದ!
ಓಲಗದಿ ನನ ನಲ್ಲ ಮೆರೆದನಾದರೆ ಆಗ
ಸಾರ್ಥಕವಲ್ಲವೇನೆ—ಏ ಗೆಳತಿ
ನನ ಕುಂಕುಮದ ಭಾಗ್ಯಾನೆ!

ಬರಿ ನೂರು ವರ್ಷಗಳ ಹಿಂದೆ ಹೆಂಡಂದಿರು ಗಂಡಂದಿರಿಗೆ ಉಣಿಸುತಿದ್ದರು; ಮಾತ್ರವಲ್ಲ ತೊಡಿಸುತಿದ್ದರು ಕೂಡ. ಹಿಸ್ಸಾರ ಜಿಲ್ಲೆ ದಿನೋದದ ಶ್ರೀ ಮುರಲೀಧರರು ಹೇಳುವ ("ಮಧುಕರ" ಸಂಪುಟ ೪—ಸಂಚಿಕೆ ೨), ಸುತ್ತಮುತ್ತಲಿನ ಹೆಣ್ಣುಮಕ್ಕಳೆಲ್ಲ ಸೇರಿ [illegible] ಗಾಲದಲ್ಲಿ ಮುಂಜಾನೆ ಬಿಸಿಲು ಕಾಯಿಸುತ್ತ ನೂಲುತೆಗೆಯುವದನ್ನು ಅವರು ಚಿಕ್ಕಂದಿನಲ್ಲಿ ನೋಡಿದ್ದರಂತೆ. ಈ ಕೂಟಗಳಿಗೆ "ಧೂಪಿಯಾ" (ಧೂಪ=ಬಿಸಿಲು) ಎಂಬ ಹೆಸರು. ಹುಡುಗಿಯರು ರಾಟೆ ತಿರುವುತ್ತ ಹಾಡುತಿದ್ದರು. ಬೇರೆ ಋತುಗಳಲ್ಲಿ ಅವರು ಇಂಥವೇ ಕೂಟಗಳನ್ನು ಸಂಜೆಗೆ ಸೇರಿಸುತಿದ್ದರು. ಅವಕ್ಕೆ "ಸುರತಿಯಾ" ಎಂದು ಹೆಸರು. ಇಂದಿಗೂ ಹಿಸ್ಸಾರದಲ್ಲಿ ಮದುವೆಗಳ ಬಳುವಳಿಯಲ್ಲಿ ಅವಶ್ಯವಾದ ಪದಾರ್ಥವೆಂಬ ವಿಧಿಯುಂಟು. ಮದುಮಗಳಿಗೆ ಕೈನೂಲಿನ ಕೈಮಗ್ಗದ ಅರಿವೆಗಳನ್ನೇ ತೊಡಿಸುವ ಪರಿಪಾಠವೂ ಉಂಟು. —ವಿ. ಜಿ. ಡಿ

### ತಿದ್ದುಪಡಿ

ಬೆಲ್ಲದ ಮೇಲಿನ ನಿಯಂತ್ರಣ ತೆಗೆದ ಕೂಡಲೆ ಅದರ ಧಾರಣೆಯಿಂದು ನಾಲ್ಕುಪಟ್ಟು ಏರಿದೆ. ೧೦ ಬಿಲ್ಲಿಗೆ ಪೌಂಡು ಇದ್ದ ಬೆಲ್ಲ ಇಂದು ಹತ್ತಾಣೆ ಕೊಟ್ಟರೂ ಸಿಕ್ಕುವದಿಲ್ಲ ಎಂದು ಇದೇ ಸಂಚಿಕೆಯ ಟೀಕೆ ಟಿಪ್ಪಣೆಯಲ್ಲಿದ್ದುದನ್ನು ಎರಡುಪಟ್ಟು ಏರಿದೆ. ೧೦ ಬಿಲ್ಲಿಗೆ ಸೇರು ಇದ್ದ ಬೆಲ್ಲ ಎಂದು ತಿದ್ದಿಕೊಂಡು ಓದಬೇಕಾಗಿ ಸೂಚನೆ.





# ಹಿಂದುಸ್ತಾನ

## ಮುಂಬಯಿ

ಮುಂಬಯಿಯಲ್ಲಿ ಒಂದು ದೊಡ್ಡ ಮತ್ತು ಒಂದು ಸಣ್ಣ ಚಾಕು ಇಟ್ಟುಕೊಂಡದ್ದಕ್ಕಾಗಿ ಒಬ್ಬನಿಗೆ ೬ ತಿಂಗಳ ಸಶ್ರಮ ಶಿಕ್ಷೆ ವಿಧಿಸಲಾಯಿತು.

ಡೆಕ್ಕನ ಕೆನಾಲ ಕಾರಖಾನೆ ಪ್ರದೇಶದಲ್ಲಿರುವ ಸ್ಥಳೀಕ ಜಮೀನದಾರರು ತಮ್ಮ ತಮ್ಮ ಹಳ್ಳಿಗಳಲ್ಲಿ ಮುಂದಿನ ಮೂರು ವರ್ಷಗಳಲ್ಲಿ ಒಂದೆಡೆಗೇ ನೀರು ತೆಗೆದುಕೊಳ್ಳುವ ಪ್ರದೇಶವನ್ನು ಏರ್ಪಡಿಸಬೇಕು. ಸರಕಾರದವರು ಗೊತ್ತುಪಡಿಸುವ ದರಗಳಿಗೆ ಕಂಪನಿಗಳಿಗೇ ಕಬ್ಬನ್ನು ಮಾರಬೇಕೆಂಬ ಕ್ರಮವನ್ನನುಸರಿಸಬೇಕೆಂದು ಮುಂಬಯಿ ಸರಕಾರದವರು ನಿರ್ಧರಿಸಿದ್ದಾರೆ. ಸರಕಾರದವರು ಗೊತ್ತುಪಡಿಸಿದ ದರಗಳಿಗೆ ಕಬ್ಬು ಮಾರಲು ಯಾವನೊಬ್ಬ ಜಮೀನದಾರನು ಒಪ್ಪದಿದ್ದರೆ ಅವನಿಗೆ ನೀರಿನ ಅಪ್ಪಣೆ ಕೊಡಬಾರದೆಂದು ನಿರ್ಧರಿಸಲಾಗಿದೆ.

ಮಂಗಳವಾರ ಮುಂಜಾನೆಯಿಂದ ಮಧ್ಯರಾತ್ರಿವರೆಗೆ ಮುಂಬಯಿಯಲ್ಲಿ ೩ ಇರಿತಗಳಾದವು. ಪರೇಳ ಭಾಗದಲ್ಲಿ ಮಂಗಳವಾರ ಸಾಯಂಕಾಲ ಆ್ಯಸಿಡ್ ಒಗೆಯಲಾಯಿತು. ಯಾರಿಗೂ ಗಾಯಗಳಾಗಲಿಲ್ಲ. ಪಾಯಧುನಿ ಭಾಗದಲ್ಲಿ ದೇಶೀ ಬಾಂಬು ಒಗೆದದ್ದಕ್ಕೆ ೭ ಜನ ಸೆರೆಹಿಡಿಯಲ್ಪಟ್ಟರು. ಒಟ್ಟಾರೆ ಅಂದು ೩೫ ಜನ ಸೆರೆ ಹಿಡಿಯಲ್ಪಟ್ಟರು.

ಕುಲಾಬಾ ಜಿಲ್ಹೆಯ ಮಾನಗಾಂವ ಮಹಾಡ ಮತ್ತು ರೋಹಾ ತಾಲೂಕಗಳ ಕೆಲ ಪ್ರದೇಶಗಳಲ್ಲಿ ಇನ್ನೂ ಬಹಳ ವಿಷಮ ಪರಿಸ್ಥಿತಿಯಿದೆ. ೧೦ ಮನೆಗಳು ಸುಡಲ್ಪಟ್ಟದ್ದು ೧೨ ಜನ ಕೊಲ್ಲಲ್ಪಟ್ಟಿರುವರು. ಪಾನಾಪಾರದಲ್ಲಿ ಪೋಲೀಸರು ಗೋಳೀಬಾರ ಮಾಡಬೇಕಾಯಿತು. ಅದರಲ್ಲಿ ಒಬ್ಬನು ಸತ್ತಿದ್ದು ಮೂವರಿಗೆ ಗಾಯಗಳಾಗಿವೆ. ಸೈನಿಕರು ಮತ್ತು ಪೋಲೀಸರು ಈ ಪೀಡಿತ ಪ್ರದೇಶಗಳಲ್ಲಿ ಕಾವಲು ಮಾಡುತಿರುವರು.

ಮುಂಬೈ ಪ್ರಾಂತದಲ್ಲಿಯ ಹೊಸ ಬಾವಿಗಳನ್ನು ಕಡಿಸುವ ಮತ್ತು ಹಳೆಯವನ್ನು ಹೆಚ್ಚು ಆಳ ಮಾಡುವ ಕಾರ್ಯವನ್ನು ಸರಕಾರದವರು ಜಿಲ್ಹಾ ಗ್ರಾಮಾಭಿವೃದ್ಧಿ ಮಂಡಳಗಳಿಗೆ ಒಪ್ಪಿಸಿದ್ದಾರೆ. ಇಂಥ ಬಾವಿಗಳಿಗಾಗಿ ಕಾಣಿಕೆ ಮತ್ತು ತಗಾಯಿಗಳ ಬಗ್ಗೆ ಆಯಾ ಜನರು ಈ ಮಂಡಳಗಳಿಗೇ ಅರ್ಜಿಮಾಡಿಕೊಳ್ಳಬೇಕು.

ಮುಂಬಯಿ ಪ್ರಿನ್ಸೆಸ್ ಸ್ಟ್ರೀಟ ಪ್ರದೇಶದಲ್ಲಿ ೧೩ ನೇ ತಾರೀಕು ಮುಂಜಾನೆ ಒಂದು ಪ್ರಾಣಾಂತಿಕ ಇರಿತವಾದ ಸ್ವಲ್ಪೇ ಹೊತ್ತಿನಲ್ಲಿ ೧೧೦ ಜನ ಸೆರೆಹಿಡಿಯಲ್ಪಟ್ಟರು. ಪಾಯಧುನಿ ಭಾಗದಲ್ಲಿ ಚಾಕುವಿನಿಂದ ಇರಿದದ್ದರ ಸಂಬಂಧದಲ್ಲಿ ೭ ಜನ ಹಿಡಿಯಲ್ಪಟ್ಟಿದ್ದಾರೆ. ಮಹಾರಬಾವಡಿ ಪ್ರದೇಶದಲ್ಲಿ ಅಂಗಡಿ ಲೂಟಿ ಮಾಡುವಾಗ ಇಬ್ಬರು ಸಿಕ್ಕಿರುವರು.

ಸೊಲ್ಲಾಪುರ ಜಿಲ್ಹೆಯಿಂದ ಅಪ್ಪಣೆ ಪಡೆಯದೆ ಯಾರೂ ತಯಾರಿ ಬಟ್ಟೆಗಳನ್ನು ಹೊರಗೆ ಕಳಿಸಬಾರದೆಂದು ವಿಧಿಸಲಾಗಿದೆ.

ಅಹಮದಾಬಾದ ಕಾಲಾಪುರ ಭಾಗದಲ್ಲಿ ಡಿ. ೧೮ ಕ್ಕೆ ಒಂದು ಸ್ಫೋಟ ಸಂಭವಿಸಿ ೭ ಜನರು ಗಾಯಗೊಂಡರು. ಇದರಂತೆ ಒಂದು ಸಿನೇಮಾ ಬಳಿ ಸ್ಫೋಟಕ ದ್ರವ್ಯ ಒಗೆದದ್ದರಿಂದ ಇಬ್ಬರು ಗಾಯಗೊಂಡಿದ್ದಾರೆ.

ಇರಿತಗಳು ನಿಲ್ಲದೆ ಹೋದರೆ ಇರಿತಗಳಲ್ಲಿ ತೊಡಗಿದ ಸಮಾಜದವರ ಮೇಲೆ ಸಾಮೂಹಿಕ ದಂಡ ಹೇರಲಾಗುವದೆಂದೂ ಆ ಆ ಭಾಗದಲ್ಲಿಯ ಧುರೀಣರನ್ನು ಹೊಣೆಗಾರರನ್ನಾಗಿ ಹಿಡಿಯಲಾಗುವದೆಂದೂ ಆಹಾರ ಸೀದಾ ನಿಲ್ಲಿಸುವ ಕಠೋರ ಉಪಾಯ ಸಹ ಕೈಕೊಳ್ಳಬೇಕಾಗುವದೆಂದೂ ಅಹಮದಾಬಾದ ಡಿಸ್ಟ್ರಿಕ್ಟ ಮ್ಯಾಜಿಸ್ಟ್ರೇಟರು ಪ್ರಕಟನೆ ಹೊರಡಿಸಿ ಎಚ್ಚರಿಕೆ ಕೊಟ್ಟಿದ್ದಾರೆ.

ಜಾತೀಯ ದ್ವೇಷವನ್ನು ಹೆಚ್ಚಿಸುವ ರಾಜಕೀಯ, ಘೋಷಗಳನ್ನಾಗಲಿ ಹಾಡುಗಳನ್ನಾಗಲಿ ಹಾಡಬಾರದೆಂದೂ ಭಾಷಣ ಮಾಡಬಾರದೆಂದೂ ಚಿತ್ರಗಳನ್ನು ಪ್ರದರ್ಶಿಸಬಾರದೆಂದೂ ಭಿತ್ತಿಪತ್ರಗಳನ್ನು ಹಚ್ಚಬಾರದೆಂದೂ ಇಲ್ಲವೆ ಜಾತೀಯ ದ್ವೇಷವನ್ನು ಬೆಳೆಸುವ ಬೇರೆ ಯಾವ ಕೃತ್ಯವನ್ನು ಮಾಡಬಾರದೆಂದೂ ಪುಣೆ ಜಿಲ್ಹಾ ಮ್ಯಾಜಿಸ್ಟ್ರೇಟರು ಆಜ್ಞೆ ಹೊರಡಿಸಿದ್ದಾರೆ. ೧೫ ದಿನಗಳ ವರೆಗೆ ಇದರ ಅವಧಿಯಿದೆ.

ಸಂಗಮನೇರದಲ್ಲಿ ನೆರೆದ ಒಂದು ದೊಂಬಿಗಾರರ ಸಮೂಹದ ಮೇಲೆ ಪೋಲೀಸರು ಗುಂಡು ಹಾರಿಸಿದರು. ಆದರೆ ಯಾರಿಗೂ ಗಾಯಗಳಾಗಲಿಲ್ಲ. ಪಾಲಿಕಾ ಎಂಬ ಪಟ್ಟಣದಲ್ಲಿ ಅಸಿಡ್‌ದಿಂದ ನಾಲ್ವರಿಗೆ ಗಾಯಗಳಾಗಿವೆ. ಪೋಲೀಸರ ಸಹಾಯದಿಂದ ಶಾಂತತಾ ಸಮಿತಿಯು ಶಾಂತಿ ಪ್ರಸ್ಥಾಪಿಸಲು ಯತ್ನಿಸುತ್ತದೆ.

ಗೋವೆಯ ಸತ್ಯಾಗ್ರಹ ಧುರೀಣರಾದ ಡಾ. ವಿನಾಯಕ ಮಾಯಿನಕರರನ್ನು ಮತ್ತೆ ಸೆರೆಹಿಡಿದು ಖಟ್ಲೆಗೆ ಗುರಿಮಾಡಿದ್ದಾರೆಂದು ತಿಳಿಯುತ್ತದೆ.

ಮುಂಬಯಿ ಸರಕಾರದವರು ಮುಂಬಯಿ ಆಹಾರ ಬೆಳೆ ಸಂಪಾದನೆ ಹುಕುಮನ್ನು ಜಾರಿಯಲ್ಲಿ ತಂದಿದ್ದಾರೆ. ಈಗ ಅದನ್ನು ಠಾಣಾ ಮತ್ತು ಕುಲಾಬಾ ಜಿಲ್ಹೆಗಳಿಗೆ ಅನ್ವಯಿಸಿದ್ದಾರೆ. ಆಹಾರ ಬೆಳೆ ಸಂಗ್ರಹದ ಎಲ್ಲ ಧಾನ್ಯ ಅಥವಾ ಅದರ ಭಾಗವನ್ನು ಸರಕಾರಕ್ಕೆ ಮಾರಲು ನೋಟೀಸ ವಿಧಿಸಲು ಈ ಹುಕುಮಿನನ್ವಯ ಬರುವದು. ಜಮೀನದಾರರು ಅದರಂತೆ ನಡೆಯದಿದ್ದರೆ ಕಾಳನ್ನೆಲ್ಲ ವಶಪಡಿಸಿಕೊಳ್ಳುವ ಅಧಿಕಾರ ಅವರಿಗಿದೆ.

ಮುಂಬಯಿ ವಿಕ್ಟೋರಿಯ ಧಕ್ಕೆಯಲ್ಲಿ ರೇವೆಯನ್ನು ತೆಗೆಯುವ ಕೆಲಸ ನಡೆದಾಗ ೨೮ ಪೌಂಡು ತೂಕದ ಎರಡು ಬಂಗಾರದ ಗಟ್ಟಿಗಳು ದೊರೆತಿವೆ. ಇವುಗಳ ಬೆಲೆ ೧೧೨ ಸಾವಿರ ರೂಪಾಯಿಯಾಗುವದು. ಈ ಮೊದಲು ಇಂತಹವೆ ಮೂರು ಗಟ್ಟಿಗಳು ದೊರೆತಿದ್ದವು- ೧೯೪೪ ನೆ ಇಸ್ವಿಯಲ್ಲಾದ ಮದ್ದಿನ ಸ್ಫೋಟದಲ್ಲಿ ಕಳೆದ ಗಟ್ಟಿಗಳೇ ಇವೆಂದೂ ಇವು ತಮ್ಮವೇ ಎಂದೂ ರಿಜರ್ವ ಬ್ಯಾಂಕಿನವರು ಅಭಿಪ್ರಾಯಪಡುತ್ತಾರೆ.

## ಬಂಗಾಲ

ನೈತಿಕ ಸಮಸ್ಯೆ ಒತ್ತಟ್ಟಿಗಿರಲಿ. ಈಗ ಬಂಗಾಲವು ದೊಡ್ಡ ಆರ್ಥಿಕ ಗಂಡಾಂತರವನ್ನೆದುರಿಸಬೇಕಾಗಿದೆ. ಬಂಗಾಲದಲ್ಲಿ ಹಿಂದು ಮುಸಲ್ಮಾನರ ಜೀವನ ಒಮ್ಮುಖವಾಗಿ ಸಾಗದ್ದರಿಂದ ಆರ್ಥಿಕ ಬಹಿಷ್ಕಾರ ಮೊದಲಾದವುಗಳಿಂದ ಪರಸ್ಪರರು ತಮ್ಮ ಹಾನಿ ಮಾಡಿಕೊಳ್ಳುತ್ತಾರೆ. ಇವರಲ್ಲಿ ಮುಸಲ್ಮಾನರಿಗೆ ಹೆಚ್ಚು ಹಾನಿಯಿದೆ. ಹಿಂದು ಮುಸಲ್ಮಾನರಿಬ್ಬರೂ ಈ ಅನಾಗರಿಕತೆಯನ್ನು ಹತ್ತಿಕ್ಕಿ ಹಾಳಾದ ಸಮಾಜವನ್ನು ಪುನರ್ರಚಿಸಬೇಕೆಂದು ಮುಂತಾಗಿ ಹುಮಾಯುನ ಕಬೀರರು ಪ್ರಕಟಿಸುತ್ತಾರೆ.

ಸ್ಟಾರ ಆಫ ಇಂಡಿಯಾ ಎಂಬ ಕಲಕತ್ತೆಯ ಪತ್ರಿಕೆಯ ಮುದ್ರಕ, ಪ್ರಕಾಶಕರ ಕಡೆಯಿಂದ ೨೦೦೦ ರೂ. ಮತ್ತು ಮುದ್ರಣಾಲಯದವರಿಂದ ೨೦೦೦ ರೂ. ಜಾಮೀನ ಕೇಳಲಾಗಿದೆ. ಮುಂಬಯಿ ಗಲಭೆ ಸಂಬಂಧದಲ್ಲಿ ಬರೆದ ಲೇಖಕ್ಕಾಗಿ ಈ ಜಾಮೀನು ಕೇಳಲಾಗಿದೆ. ಕಲಕತ್ತೆಯ ಕೆಲಿಹಕಾ ಎಂಬ ಉರ್ದು ಪತ್ರಿಕೆಯ ಕಡೆಯಿಂದಲೂ ೨೦೦೦ ರೂ. ಜಾಮೀನ ಕೇಳಲಾಗಿದೆ. ಆಗಷ್ಟದಿಂದ ಇಲ್ಲಿಯ ಪತ್ರಿಕೆಗಳ ಕಡೆಯಿಂದ ಜಾಮೀನ ಹಣ ಕೇಳಿದಂತಾಗಿದೆ.

ಅ. ಭಾ. ಹಿಂದುಮಹಾಸಭೆಯ ಕಾರ್ಯದರ್ಶಿಗಳಾದ ಆಶುತೋಷ ಲಾಹಿರಿಯವರು ನೌಖಾಲಿ ಮತ್ತು ತಿಪ್ಪೇರಾಗಳಲ್ಲಿ ಪರಿಹಾರ ಕಾರ್ಯ ಕೈಕೊಳ್ಳಲು ನೌಖಾಲಿಗೆ ತೆರಳಿದರು. ಶರಚ್ಚಂದ್ರ ಬೋಸರು ೧೯ ನೇ ದಿನಾಂಕ ನೌಖಾಲಿಗೆ ತೆರಳಿದರು.

ಅಕ್ಟೋಬರ ೨೬ರಿಂದ ೨೮ರ ವರೆಗೆ ನಡೆದ ಘಟನೆಗಳ ಬಗ್ಗೆ ಹೌರಾ ವಿಭಾಗದ ಮೇಲೆ ಒಟ್ಟು ೮೫೫೦೦೦ ಪುಂಡಗಂದಾಯ ಹೇರಲಾಗಿದೆ.

## ಮಧ್ಯಪ್ರಾಂತ

ನಾಗಪುರದಲ್ಲಿ ೨೫ ಸಾವಿರ ಕೂಲಿಕಾರರನ್ನು ಬಾಧಿಸುತಿರುವ ಗಂಭೀರ ಸ್ವರೂಪದ ಔದ್ಯೋಗಿಕ ಅಶಾಂತಿಯನ್ನು ಹೋಗಲಾಡಿಸಬೇಕೆಂದು ಆರ್. ಎಸ್. ರುಯಿಕರರು ಮುಖ್ಯಮಂತ್ರಿ ಶುಕ್ಲರನ್ನು ಬಿನ್ನವಿಸಿಕೊಂಡಿದ್ದಾರೆ. ಜವಳಿ ಗಿರಣಿ ವ್ಯವಸ್ಥಾಪಕರ ಧೋರಣ ತೊಂದರೆಯದಾಗಿದೆ. ಈ ವಾದವನ್ನು ಬೇಗ ಬಗೆಹರಿಸದಿದ್ದರೆ ಪರಿಸ್ಥಿತಿ ವಿಕೋಪಕ್ಕೆ ಹೋಗುವದೆಂದೂ ಎಚ್ಚರಿಸಿದ್ದಾರೆ.

ದೇಶನಿಷ್ಠೆ ಸಮಾಜಸೇವೆಗಳೆ ಪೋಲೀಸ ಪಡೆಯ ಧ್ಯೇಯವಾಗಿರಬೇಕೆಂದು ಮಧ್ಯಪ್ರಾಂತದ ಮುಖ್ಯಮಂತ್ರಿ ಪಂಡಿತ ರವಿಶಂಕರ ಶುಕ್ಲರು ಪೋಲೀಸ ಕವಾಯತ ಸಂದರ್ಶಿಸಿದಕಾಲಕ್ಕೆ ಹೇಳಿದರು. ಕೇವಲ ಸರಕಾರನಿಷ್ಠೆಯಿಂದಲೆ ನಿಮ್ಮ ಯೋಗ್ಯತೆಯನ್ನಳೆಯುವದಿಲ್ಲ. ಜನರಿಗೆ ಸೇವೆ ಸಲ್ಲಿಸುವ ನಿಮ್ಮ ಸಾಮರ್ಥ್ಯವನ್ನೂ ಅಷ್ಟೇ ಗಮನಿಸಲಾಗುವದೆಂದು ಅವರು ನುಡಿದರು.

ಘಟನಾಸಮಿತಿ ಹರಿಜನ ಸದಸ್ಯರ ಮಾರ್ಗದರ್ಶನಕ್ಕಾಗಿ ಶ್ರೀ ಜಗಜೀವನರಾಮರ ಅಧ್ಯಕ್ಷತೆಯಲ್ಲಿ ಒಂದು ಮಂಡಳವು ನಾಗಪುರದಲ್ಲಿ ದಲ್ಲಿ ಸೇರಿದ ಹರಿಜನ ಸದಸ್ಯರ ಸಭೆಯಲ್ಲಿ ಸ್ಥಾಪಿತವಾಯಿತು. ಈ ಸಮಿತಿಯವರು ಈ ಬಗ್ಗೆ ಮನವಿಯೊಂದನ್ನು ಸಿದ್ಧಪಡಿಸುವರು. ಮುಸ್ಲಿಮರ ಪ್ರತ್ಯಕ್ಷ ಹೋರಾಟದ ನಿರ್ಧಾರವೇ ದೇಶದಲ್ಲಿಯ ಜಾತೀಯ ಗಲಭೆಗಳಿಗೆ ಕಾರಣ. ಈ ಗಲಭೆಗಳಲ್ಲಿ ಹಾನಿಗೀಡಾದ ಹರಿಜನರಿಗೆ ಈ ಸಭೆ ಸಹಾನುಭೂತಿ ತೋರಿಸುತ್ತದೆ. ತಪ್ಪಿತಸ್ಥರನ್ನು ದಂಡಿಸಬೇಕೆಂದು ಕೇಳಲಾಯಿತು.

ಮಧ್ಯಪ್ರಾಂತ ಶಾಸನ ಸಭೆಯಲ್ಲಿ ಸಾರ್ವಜನಿಕ ಶಾಂತತೆಯ ಮಸೂದೆಯನ್ನು ಸ್ವೀಕರಿಸಲಾಯಿತು. ಸಾರ್ವಜನಿಕರ ಅಭಿಪ್ರಾಯಕ್ಕೆ ಈ ಮಸೂದೆಯನ್ನು ಕಳಿಸಬೇಕೆಂದು ಮುಸ್ಲಿಂ ಲೀಗಿನವರು ಉಪಸೂಚನೆ ತಂದಿದ್ದರು ಆದರೆ ಅದು ಸ್ವೀಕೃತವಾಗಲಿಲ್ಲ.

## ಹೊಸದಿಲ್ಲಿ

ಕಳೆದ ವಾರ ಅಂದರೆ ದಿಲ್ಲಿಯಲ್ಲಿ ಗಲಭೆ ಪ್ರಾರಂಭವಾದಂದಿನಿಂದ ಸುಮಾರು ೯೦೦ ಜನ ಬಂಧಿಸಲ್ಪಟ್ಟಿದ್ದಾರೆ. ಈ ಗಲಭೆಯಲ್ಲಿ ಒಟ್ಟಿಗೆ ೨೮ ಜನ ಮರಣ ಹೊಂದಿದ್ದು ೫೪ ಜನ ಗಾಯಗೊಂಡಿರುವರು.

ಕೇಂದ್ರ ಸಂಬಳ ಸಮಿತಿಯು ೧೮ ನೇ ತಾರೀಕಿನಿಂದ ಮತ್ತೆ ಕೆಲಸ ಪ್ರಾರಂಭಿಸಿದೆ. ನಾನ್ ಗ್ಯಾಜಿಟೆಡ್ ನೋಕರರ ಸಂಬಳದ ವಿಚಾರ ಮಂಗಳವಾರದಿಂದ ಪ್ರಾರಂಭವಾಗಿದೆ. ಬೇರೆ ಬೇರೆ ಜನರ ಸಾಕ್ಷಿ ಪುರಾವೆಗಳು ನಡೆದಿವೆ.

## ಬಿಹಾರ

ಬಿಹಾರ ಇಲ್ಲವೆ ಹೊರಗಿನ ಪ್ರಾಂತಗಳ ಗಲಭೆ ಸುದ್ದಿಗಳನ್ನು ಮತ್ತು ಪರಿಸ್ಥಿತಿಯ ಸಂಬಂಧದ ಟೀಕೆಗಳನ್ನು ಸೂರ್ವ ಪರಿಶೀಲನೆ ಅಧಿಕಾರಿಗಳಿಂದ ಒಪ್ಪಿಗೆ ಪಡೆದು ಪ್ರಸಿದ್ಧಿಸಬೇಕೆಂದು ಬಿಹಾರ ಸರಕಾರದವರು ಆರ್ಡಿನನ್ಸ ಹೊರಡಿಸಿ ವಿಧಿಸಿದ್ದಾರೆ.

ಪರಿಹಾರ ಕಾರ್ಯಕರ್ತರು ಲೀಗ, ಕಾಂಗ್ರೆಸ, ಜಮಾಯಿತ ಉಲೇಮಾ, ಖಾಕ್ಸರಸಂಸ್ಥೆ ಹಿಂ. ರಾ. ಸೈನ್ಯ ಇಲ್ಲವೆ ಹಿಂದೂಮಹಾಸಭೆಯ ಅಪ್ಪಣೆಪತ್ರ ತೋರಿಸಿದ ಹೊರತು ಪಾಟಣಾ ಜಿಲ್ಹೆಯಲ್ಲಿ ಅವರಿಗೆ ಪ್ರವೇಶ ಕೊಡುವದಿಲ್ಲೆಂದು ಬಿಹಾರ ಸರಕಾರದ ಹುಕುಮು ಹೊರಟಿದೆ. ಪರಿಹಾರ ಕೆಲಸಗಾರರೆಂದು ಹೇಳುತ್ತ ಅನೇಕ ಜನರು ಜಿಲ್ಹೆಯಲ್ಲಿ ಬಂದಿದ್ದೇ ಈ ಹುಕುಮಿಗೆ ಕಾರಣವಾಗಿದೆ.

ಬಿಹಾರದ ಪೂರ್ಣಿಯಾ ಜಿಲ್ಹೆಯಲ್ಲಿ ಕಳೆದ ಹಲವು ದಿನಗಳಲ್ಲಿ ಮೂವರು ಹೊಟ್ಟೆಗಿಲ್ಲದೆ ಸತ್ತ ವರದಿ ಬಂದಿದೆ.

## ಯುಕ್ತಪ್ರಾಂತ

ಪಂ. ಮಾಲವೀಯವರ ಸ್ಥಾನದಲ್ಲಿ ಮಹಾತ್ಮಾ ಗಾಂಧಿಯವರನ್ನು ಬನಾರಸ ಹಿಂದೂ ವಿಶ್ವವಿದ್ಯಾಲಯದ ಮೇಲ್ವಿಚಾರಕರನ್ನಾಗಿ ಮಾಡಬೇಕೆಂದು ಆ ವಿಶ್ವವಿದ್ಯಾಲಯಕ್ಕೆ ಸಂಬಂಧಿಸಿದ ಹಲವರ ವಿಚಾರವಿದೆಂದು ತಿಳಿಯುತ್ತದೆ.

ಶ್ರೀಮತಿ ವಿಜಯಲಕ್ಷ್ಮೀ ಪಂಡಿತರು ಡಿಸೆಂಬರ ಕೊನೆಯ ವಾರದಲ್ಲಿ ಅಮೇರಿಕೆಯಿಂದ ಹಿಂದುಸ್ತಾನಕ್ಕೆ ಹೊರಡುವರೆಂದು ತಿಳಿಯುತ್ತದೆ.

ಕಾನಪುರದಲ್ಲಿ ಕರ್ಫ್ಯೂ ಹುಕುಮು ಮುರಿದ ಬಗ್ಗೆ ೧೫ನೇ ತಾರೀಕು ೧೮೬ ಜನರನ್ನು ಸೆರೆ ಹಿಡಿಯಲಾಯಿತು. ವಿಚಾರಣೆಯಾಗಿ ಅವರಿಗೆ ೧ ರಿಂದ ೫ ರೂ. ಗಳ ವರೆಗೆ ದಂಡ ವಿಧಿಸಲಾಯಿತು.

೧೯೪೨ ನೇ ಇಸ್ವಿಯ ಚಳವಳಿಯ ಕಾಲಕ್ಕೆ ಸರಕಾರಕ್ಕೆ ಸಹಾಯ ಮಾಡಿದರೆಂದು ಜಾಗೀರಿಗಳನ್ನು ಪಡೆದವರಿಂದ ಅವನ್ನು ಹಿಂತೆಗೆದುಕೊಳ್ಳಬೇಕೆಂದು ಮಂತ್ರಿಮಂಡಳದವರು ವಿಚಾರ ನಡೆಸಿರುವರೆಂದು ತಿಳಿಯುತ್ತದೆ. ಈ ರೀತಿ ಜಾಗಿರಿಗಳನ್ನು ಪಡೆದವರ ಯಾದಿಯನ್ನು ಸಿದ್ಧಪಡಿಸಲು ಈಗ ವಿಧಿಸಲಾಗಿದೆ.

ಲಖನೌ ನಗರಸಭೆಯವರು ಪ್ರವಾಸಿಕರ ಮೇಲೆ ೨ ಆಣೆಯಿಂದ ೨ ರೂಪಾಯಿ ವರೆಗೆ ಕರವನ್ನು ಹೇರಬೇಕೆಂದು ನಿರ್ಣಯಿಸಿದ್ದಾರೆ. ಹೊಟೆಲ್‌ಗಳ ಮೇಲೆ ಕರಗಳನ್ನು ಹಾಕಿರುವರು. ಇದರಿಂದ ೨೦೦ ಸಾವಿರ ರೂ. ಉತ್ಪನ್ನ ಬರುವದು.

## ಸಿಂಧ

ದಾದೂ ಗ್ರಾಮದಲ್ಲಿ ಸಯ್ಯದ ಪಕ್ಷಕ್ಕೆ ಚುನಾವಣೆಯಲ್ಲಿ ಸಹಾಯ ಮಾಡುತಿದ್ದ ಸಯ್ಯದ ಪಕ್ಷದ ಮುರದಲ್ಲಿ ಶಹಾ ಇವರು ಗುಂಡಿನೇಟು ಬಿದ್ದು ಮರಣಹೊಂದಿದರೆಂದು ತಿಳಿಯುತ್ತದೆ. ಜಿಲ್ಹಾ ಮ್ಯಾಜಿಸ್ಟ್ರೇಟರು ೧೪೪ನೇ ಕಲಮು ಜಾರಿ ಮಾಡಿ ಸಯ್ಯದರ ಮತದಾರ ಸಂಘದ ಕ್ಷೇತ್ರದಲ್ಲಿ ಯಾರೂ ಪಿಸ್ತೂಲ ಹಿಡಿದು ಅಡ್ಡಾಡಬಾರದೆಂದು ವಿಧಿಸಿದ್ದಾರೆ.

ಲಾಲಾ ಲಜಪತರಾಯರ ಜಯಂತ್ಯುತ್ಸವದ ನಿಮಿತ್ತ ಕರಾಚಿಯಿಂದ ೪೦ ಮೈಲು ದೂರದಲ್ಲಿರುವ ಟಟ್ಟಾದಲ್ಲಿ ಸಾರ್ವಜನಿಕ ಸಭೆಯಲ್ಲಿ ಭಾಷಣ ಮಾಡಲು ಕಾಂಗ್ರೆಸಿಗರು ಹೋಗುತಿದ್ದ ಜೀಪ ಗಾಡಿಯು ಅಪಘಾತಕ್ಕೀಡಾದ್ದರಿಂದ ಶ್ರೀ ಘನಶ್ಯಾಮ ಮಿರಚಂದಾನಿಯವರು ಸತ್ತರು. ಉಳಿದ ೭ ಜನರಿಗೆ ಗಾಯಗಳಾದವು.

## ಮದ್ರಾಸ

ಮದ್ರಾಸ ಸರಕಾರದ ಹೊಸ ಜವಳಿ ಯೋಜನೆಯಿಂದ ಮದ್ರಾಸ ಪ್ರಾಂತದ ಹತ್ತೀ ಬೆಳೆಗೇನೂ ಹಾನಿ ಸಂಭವಿಸಲಾರದೆಂದು ಶ್ರೀ ಟಿ. ಪ್ರಕಾಶಂರು ಪ್ರಕಟನೆ ಹೊರಡಿಸಿದ್ದಾರೆ.

ಮದ್ರಾಸ ಮುಖ್ಯ ಮಂತ್ರಿಗಳಾದ ಶ್ರೀ ಟಿ. ಪ್ರಕಾಶಂರು ಮತ್ತು ಮುಸ್ಲಿಂ ಲೀಗ ಅಧ್ಯಕ್ಷರಾದ ಮಹಮ್ಮದ ಇಸ್ಮಾಯಿಲ್‌ರು ಸಂಯುಕ್ತ ಪ್ರಕಟನೆ ಹೊರಡಿಸಿ ಉದ್ವೇಗಕಾರಕ ಭಾಷಣ ಮತ್ತು ಲೇಖನಗಳನ್ನು ಬಿಟ್ಟುಬಿಡಬೇಕೆಂದೂ ಜಾತೀಯ ಸೌಹಾರ್ದವನ್ನು ಕಾಯ್ದುಕೊಳ್ಳಬೇಕೆಂದೂ ಬಿನ್ನವಿಸಿದ್ದಾರೆ.

# ಕ ರ್ನಾ ಟ ಕ

## ಧಾರವಾಡ

ಧಾರವಾಡ ಜಿಲ್ಹೆಯ ಅಂಗಡಿಗಳಲ್ಲಿ ಕೆಂಪು ಸಣ್ಣ, ಯಾತಕ್ಕೂ-ಬಾರದ, ಹಿಟ್ಟಿಲ್ಲದ ಜೋಳ ಮಾರಹತ್ತಿರುವರು. ಅಕ್ಕಿಯ ಪ್ರಮಾಣ ಒಮ್ಮೆಲೆ ಅರ್ಧಕ್ಕಿಂತ ಕಡಮೆಯಾಗಿದೆ. ಗೋದಿಯೂ ಚೆನ್ನಾಗಿಲ್ಲ. ಗೋವಿನ ಜೋಳದಲ್ಲಿ ಹಿಟ್ಟು ಅರ್ಧಕ್ಕರ್ಧ ಹೊರಡುವದು. ಇದರಿಂದ ಜನತೆಗೆ ಬಹಳ ತೊಂದರೆಯಾಗಹತ್ತಿದೆ. ಕೊಬ್ರಿ ಎಣ್ಣೆ ಸೀದಾ ಅಂಗಡಿಗಳಲ್ಲಿ ಸಿಕ್ಕದಂತಾದ್ದರಿಂದ ೧೦-೧೧ ಆಣೆಗೆ ಸೇರಿನಂತೆ ಈಗ ಕೊಳ್ಳಬೇಕಾಗಿದೆ. ಬೆಲ್ಲದ ಧಾರಣಿ ಹೇರಿಗೆ ೧೧೦ ರೂಪಾಯಿಗಳ ವರೆಗೆ ಹೋಗಿದ್ದು ಕಿರುಕಳ ಸೇರಿಗೆ ೪-೫ ಆಣೆ ಮಾರುತ್ತಾರೆ.

ಪುಸ್ತಕ ಪ್ರಕಾಶನಕ್ಕೆ ಅನುಕೂಲವಾಗುವಂತೆ ಕಾಗದವನ್ನು ಗಿರಣಿಗಳು ತಯಾರಿಸಬೇಕು, ಪಠ್ಯ ಪುಸ್ತಕಗಳ ಸಲುವಾಗಿ ಅಗ್ಗದ ಕಾಗದ ಪೂರಯಿಸಬೇಕು, ಪ್ರಕಾಶಕರಿಗೆ ಗಿರಣಿಯಿಂದ ನೇರವಾಗಿ ಕಾಗದ ಪೂರೈಕೆಯಾಗಬೇಕು; ಬೇಕಾದಲ್ಲಿ ಅಚ್ಚಿನ ಕಾರ್ಯ ಒಪ್ಪಿಸಲು ಪ್ರಕಾಶಕರಿಗೆ ಅನುಕೂಲವಿರಬೇಕಲ್ಲದೆ ಅದಕ್ಕೆ ಪ್ರಾಶಸ್ತ್ಯ ದೊರೆಯಬೇಕೆಂದು ಮುಂತಾಗಿ ಧಾರವಾಡ ಪ್ರಕಾಶಕರು ಹಿಂದುಸ್ತಾನ ಸರಕಾರದವರನ್ನು ಕೇಳಿಕೊಂಡಿದ್ದಾರೆ.

ಹುಬ್ಬಳ್ಳಿಯ ಆರ್ಯ ಸಮಾಜದವರು ನೌಖಾಲಿ ನಿರಾಶ್ರಿತರಿಗಾಗಿ ಧನವನ್ನು ಕೂಡಿಸುತಿರುವರು. ಅಲ್ಲಿಗೊಂದು ಪರಿಹಾರ ಪಥಕವನ್ನು ಕಳಿಸಬೇಕೆಂದೂ ವಿಚಾರ ನಡೆಸಿರುವರು.

ಹಾವೇರಿ ಪೋಲೀಸ ಹವಾಲದಾರ ಶ್ರೀ ಚನಬಸನಗೌಡಾ ಎಂಬುವವರು ಶ್ರೀ ಬಸವಣ್ಣೆಪ್ಪಾ ಗೋದಿ ಇವರಿಂದ ಲಂಚ ತೆಗೆದುಕೊಂಡಿದ್ದಾರೆಂದು ಲಂಚ ನಿರೋಧಕ ಸಬ್ ಇನಸ್ಪೆಕ್ಟರ ಶ್ರೀ ಶೇಕರು ೧೫ ನೇ ತಾರೀಕು ಪಂಚನಾಮೆ ಮಾಡಿ ಖಟ್ಲೆ ಹಾಕಿರುವರೆಂದು ತಿಳಿಯುತ್ತದೆ.

ಗದಗ ಕಾಟನ್‌ಸೇಲ ಸೊಸಾಯಿಟಿಯ ವ್ಯವಸ್ಥಾಪಕರೆ ಮೊದಲಾದ ಮೇಲಿನ ವರ್ಗದ ಅಧಿಕಾರಿಗಳಿಗೆ ದೊರೆತಂತೆ ತಮಗೂ ಹೆಚ್ಚಿಗೆ ಸಂಬಳ ಹಾಗು ತುಟ್ಟಿಭತ್ತೆ ದೊರೆಯಬೇಕೆಂದು ಕಾರಕೂನರು ಬೇಡಿಕೊಂಡಿದ್ದರು. ಆದರೆ ಇವರ ಬೇಡಿಕೆ ಮಾನ್ಯವಾಗದ್ದರಿಂದ ೧೮ ನೇ ತಾರೀಕಿನಿಂದ ಅವರು ಸಂಪು ಹೂಡಿರುವರು.

ಮಲೆನಾಡಿಗೆ ಕೂಲಿಗಾಗಿ ಬಂದ ಜನರಲ್ಲಿ ಪ್ರತಿಯೊಬ್ಬನು ಕೂಲಿಯ ಕಾಳೆಂದು ೨ ಚೀಲ ಭತ್ತ ಅಥವಾ ೧ ಚೀಲ ಜೋಳ ಇಲ್ಲವೆ ಬೇರೆ ಕಾಳನ್ನು ತನ್ನಊರಿಗೆ ಒಯ್ಯಲಿಕ್ಕೆ ಬರುತ್ತದೆ. ಧಾರವಾಡ ಜಿಲ್ಹೆಯಿಂದ ಹೊರಗೆ ಪ್ರತಿಯೊಬ್ಬನಿಗೆ ೧ ಚೀಲ ಭತ್ತ ಮಾತ್ರ ಒಯ್ಯಲು ಬರುತ್ತದೆ ಇದಕ್ಕೆ ಯಾರ ವಿಶೇಷ ಅಪ್ಪಣೆಯೂ ಬೇಕಾಗಿಲ್ಲೆಂದು ಶಾಸನ ಸಭೆಯ ಸದಸ್ಯರಾದ ಶ್ರೀ ರಾ. ಶ್ರೀ. ಹುಕ್ಕೇರಿಕರರು ಪ್ರಕಟಿಸುತ್ತಾರೆ.

## ಬೆಳಗಾವಿ

ಅಕ್ಟೋಬರ ೩೧ ನೇ ದಿನಾಂಕ ಬೆಳಗಾವಿಯಲ್ಲಿ ಕ್ರೈಸ್ತ ತರುಣರಾದ ಶ್ರೀ ಸುಮಿತ್ರಪ್ಪಾ ಧಮ್ಮಣಗಿ ಇವರ ಲಗ್ನವು ಹುಬ್ಬಳ್ಳಿಯ ರೂತಬಾಯಿ ಗೋಕಾವಿ ಇವರೊಂದಿಗೆ ನೆರವೇರಿತು. ಆ ಕಾಲಕ್ಕೆ ವಧೂವರರು ಪೂರ್ಣ ಖಾದೀ ಧರಿಸಿದ್ದರು. ಶ್ರೀ ಸಿ. ಎಸ್. ಕರಬಿಯವರು ವಧೂವರರಿಗೆ ಉಪದೇಶ ಮಾಡಿದರು. ಆಹೇರಿಗೆಂದು ಬಂದ ೪೬೦ ರೂಪಾಯಿಗಳನ್ನು ಸುಮಿತ್ರಪ್ಪನವರು ಸೆಂಟೆನರಿ ಕ್ರಿಶ್ಚನ್ ಅಸೋಸಿಯೇಶನಕ್ಕೆ ಕೊಟ್ಟರು. ಈ ಮೊದಲು ಇವರು ಈ ಸಂಘಕ್ಕೆ ೧೨೦ ರೂ. ಕೊಟ್ಟು ಆಜೀವ ಸದಸ್ಯರಾಗಿರುವರು.

ಅರಭಾವಿಯ ರಾವಸಾಹೇಬ ಸತ್ಯಪ್ಪ ಜಮಖಂಡಿ ಇವರ ಅರಭಾವಿಯಲ್ಲಿರುವ ಮನೆಯನ್ನು ಝಡತಿ ಮಾಡಿ ನೆಲಮನೆಯಲ್ಲಿದ್ದ ಜಮಾಖರ್ಚಿನ ಪುಸ್ತಕಗಳನ್ನು ಲಂಚ ನಿರ್ಮೂಲನ ಶಾಖೆಯವರು ಜಪ್ತ ಮಾಡಿರುವರು. ಅಲ್ಲಿಯೆ ಇದ್ದ ೧೨ ಚಿಮಣಿಎಣ್ಣೆ ಡಬ್ಬಿಗಳನ್ನು ವಶಪಡಿಸಿಕೊಂಡಿರುವರು. ರಾವಸಾಹೇಬರು ಖೊಟ್ಟಿ ಕಾಗದಪತ್ರಗಳನ್ನು ಇನ್‌ಕಮ್‌ಟ್ಯಾಕ್ಸ ಕಚೇರಿಯವರಿಗೆ ಒಪ್ಪಿಸಿ ೫೦ ಸಾವಿರ ರೂ. ಸರಕಾರಕ್ಕೆ ಮೋಸ ಮಾಡಿದರೆಂಬ ಆರೋಪವಿದೆ.

ಬೇರಗಾವಿಯಲ್ಲಿ ಪ್ಲೇಗ ಬೇನೆ ಪ್ರಾರಂಭವಾಗಿದ್ದು ಪ್ಲೇಗ ಮೈಲೀ ಚುಚ್ಚುವ ಕೆಲಸ ನಡೆದಿದೆ. ಅಲ್ಲಿ ಒಬ್ಬನು ಮೈಲೀ ಚುಚ್ಚಲು ಅಡ್ಡಿ ಮಾಡಿದ್ದರಿಂದ ಪ್ಲೇಗ ನಿಯಂತ್ರಕ ನಿಯಮಗಳನ್ವಯ ದಂಡ ವಿಧಿಸಲಾಯಿತು.

ಕರ್ನಾಟಕ ಮಹಿಳಾ ಪರಿಷತ್ತಿನ ೫ ನೇ ಅಧಿವೇಶನ ೧೬ ನೇ ತಾರೀಕು ಮಧ್ಯಾಹ್ನ ಸೌ. ಲೀಲಾವತಿ ಮುನಶಿಯವರ ಅಧ್ಯಕ್ಷತೆಯಲ್ಲಿ ನಡೆಯಿತು. ಪುಂಡಾಟಿಕೆಯನ್ನೆದುರಿಸಲು ಸ್ತ್ರೀಯರು ಸನ್ನದ್ಧರಾಗಬೇಕೆಂದು ಅವರು ತಮ್ಮ ಅಧ್ಯಕ್ಷ ಭಾಷಣದಲ್ಲಿ ಹೇಳಿದರು. ಶ್ರೀಮತಿ ಪದ್ಮಾವತಿಬಾಯಿ ಅಂಗಡಿಯವರು ಸ್ವಾಗತಾಧ್ಯಕ್ಷರಾಗಿದ್ದರು. ಶ್ರೀ ಉಮಾಬಾಯಿ ಕುಂದಾಪುರ ಇವರು ಕಸ್ತೂರಬಾ ನಿಧಿಯ ವಿನಿಯೋಗ ಮುಂದಿನ ಯೋಜನೆ ಮೊದಲಾದವುಗಳನ್ನು ವಿವರಿಸಿದರು.

ಬೆಳಗಾವಿಯಲ್ಲಿ ಕರ್ನಾಟಕ ಸೇವಾದಲದ ಸೈನಿಕರು ಮತ್ತು ಇತರರು ಪೂರ್ವ ಬಂಗಾಲ ಆಪದ್ಗ್ರಸ್ತರಿಗೆ ಸಹಾಯನಿಧಿಯನ್ನು ಕೂಡಿಸುತಿರುವರು. ಈಗಾಗಲೆ ೭೭೫ ರೂ. ಕೂಡಿವೆಂದು ೧೪ ನೇ ದಿನಾಂಕದ ವರದಿ.

ಬೆಳಗಾವಿಯ ವಯೋವೃದ್ಧ ಕಾಂಗ್ರೆಸ ಕಾರ್ಯಕರ್ತರಾದ ಶ್ರೀ ಬಾಬಾಸಾಹೇಬ ಸೋಮಣ ಇವರು ವಯಸ್ಸಿನ ೭೨ ನೇ ವರ್ಷದಲ್ಲಿ ೧೪ ನೇ ತಾರೀಕು ನಿಧನ ಹೊಂದಿದರೆಂದು ತಿಳಿಸಲು ವಿಷಾದಿಸುತ್ತೇವೆ. ೧೮೯೬ ರಲ್ಲಿ ಬೆಳಗಾವಿಯಲ್ಲಿ ವಕೀಲಿ ಮಾಡಿ ಮುಂದೆ ೧೮೯೮ ರಲ್ಲಿ ಸಾಂಗಲಿ ನ್ಯಾಯಾಧೀಶರಾಗಿದ್ದರು. ಶ್ರೀ ಗಂಗಾಧರರಾಯರ ಸಂಬಂಧ ಬಂದಂದಿನಿಂದ ಅವರು ರಾಜಕಾರಣದಲ್ಲಿ ಬಿದ್ದು ಕೊನೆವರೆಗೆ ರಾಷ್ಟ್ರ ಸೇವೆ ಮಾಡಿದರು.

## ಬಳ್ಳಾರಿ

ಬಳ್ಳಾರಿಯ ಪ್ರಮುಖ ನಾಗರಿಕರೂ ಮದ್ರಾಸ ಶಾಸನ ಸಭಾ ಸದಸ್ಯರೂ ಮುನಸಿಪಾಲಟಿ ಅಧ್ಯಕ್ಷರೂ ಆಗಿದ್ದ ಅಬ್ದುಲ್ ರಾವುಫರು ಪೈಗಂಬರವಾಸಿಗಳಾದರು. ಈ ಬಗ್ಗೆ ಅನೇಕ ಸಂಘ ಸಂಸ್ಥೆಗಳು ದುಃಖಪ್ರದರ್ಶನ ಮಾಡಿದವು.

ಆದವಾನಿಯಿಂದ ೨೪ ಮೈಲು ದೂರ ಇರುವ ಈಶ್ವರ ಗುಡಿಯಲ್ಲಿಯ ಲಿಂಗವನ್ನು ಯಾರೋ ಒಡೆದಿದ್ದಾರೆ. ಈ ಬಗ್ಗೆ ಹಿಂದುಗಳು ಮೇಲಧಿಕಾರಿಗಳಲ್ಲಿ ದೂರಿಕೊಂಡಿದ್ದಾರೆ. ಈ ದೇವಾಲಯವು ಗುಡ್ಡದ ಮೇಲಿದ್ದು ಹಿಂದುಗಳಿಗೆ ಅಭಿಮಾನದ ಸ್ಥಳವಾಗಿದೆ.

## ವಿಜಾಪುರ

ವಿಜಾಪುರ ಜಿಲ್ಹೆಯ ಉತ್ತರಭಾಗದ ಅಬಕಾರಿ ಇನಸ್ಪೆಕ್ಟರರೊಬ್ಬರು ಲಂಚ ತೆಗೆದುಕೊಳ್ಳುತಿರುವಾಗಲೆ ಹಿಡಿಯಲ್ಪಟ್ಟರು. ಸಹಿ ಮಾಡಿದ ೧೦೦ ರೂ ನೋಟು ಇವರು ಸಿಂದಿ ಮಕ್ತೆದಾರನ ಕಡೆಯಿಂದ ತೆಗೆದುಕೊಂಡರೆಂದು ಆರೋಪ. ಹತ್ತು ದಿನಗಳ ಹಿಂದೆ ತಾಲೂಕ ಮತ್ತು ಅಳತೆಖಾತೆಯ ನೌಕರರೊಬ್ಬರು ಇಂಥ ಒಂದು ಅಪರಾಧಕ್ಕಾಗಿ ಸೆರೆಹಿಡಿಯಲ್ಪಟ್ಟವರು.

## ಉತ್ತರ ಕನ್ನಡ

೧೯೪೨ನೇ ಇಸ್ವಿಯ ಚಲೇಜಾವ ಚಳವಳಿಯಲ್ಲಿ ಕಾಣೆಯಾದರೆಂದು ಸರಕಾರದವರು ವಶಪಡಿಸಿಕೊಂಡ ಶ್ರೀ ಶಿವರಾಮ ಹೆಗಡೆ ಕನ್ನಳ್ಳಿಯವರು ಅಸ್ತಿಪಾಸ್ತಿ ಮನೆಗಳನ್ನು ಕಾಂಗ್ರೆಸ ಸರಕಾರದವರು ಅವರಿಗೆ ತಿರುಗಿ ಕೊಡುವಂತೆ ಹುಕುಮು ಹೊರಡಿಸಿದ ಮೇರೆಗೆ ಕಳೆದ ೮ನೇ ತಾರೀಕು ಅದನ್ನೆಲ್ಲ ತಿರುಗಿ ಕೊಡಲಾಗಿದೆ. ಅಲ್ಲದೆ ಈ ವರೆಗಿನ ಅವರ ಅಸ್ತಿಯ ಚೊಕ್ಕ ಉತ್ಪನ್ನ ಮತ್ತು ಚರಾಸ್ತಿಯ ಲಿಲಾವಿನಿಂದ ಜಮೆಯಾದ ಎಲ್ಲ ಹಣವನ್ನೂ ತಿರುಗಿ ಕೊಡಿಸಿದ್ದಾರೆ.





# ಘಟನಾ ಸಮಿತಿಯ ಸದಸ್ಯರಿಗೆ ರಕ್ಷಣೆ ಕೊಡುವ ಆಶ್ವಾಸನ

## ಅವಶ್ಯಕ ವಸ್ತುಗಳ ಮೇಲೆ ನಿಯಂತ್ರಣ

### ಕೇಂದ್ರ ವಿಧಿಮಂಡಳ, ಶಾಸನಸಭೆಗಳ ಕಾರ್ಯಕಲಾಪಗಳು

ನಿಸ್ತಾರ—ರಾಜೇಂದ್ರರಲ್ಲಿ ಚಕಮಕಿ

ಕೇಂದ್ರ ವಿಧಿಮಂಡಳದಲ್ಲಿ ೨೦ನೇ ತಾರೀಕು ಅಲ್ಪಾವಧಿ ಪ್ರಶ್ನೆಗಳಿಗೆ ಉತ್ತರ ಕೊಡುವಾಗ ನಿಸ್ತಾರ ಮತ್ತು ರಾಜೇಂದ್ರ ಬಾಬುಗಳಲ್ಲಿ ಚಕಮಕಿ ನಡೆಯಿತು. ನೌಖಾಲಿ ಗಲಭೆಗಳ ನಿಶ್ಚಿತ ಅಂಕಿ ತಿಳಿದಿರದಿದ್ದರೂ ಸುಮಾರು ೨೦೦—೩೦೦ ನಿರಪರಾಧಿಗಳು ಅಲ್ಲಿ ಮಡಿದರು. ಆದರೆ ಬಿಹಾರದಲ್ಲಿ ಸತ್ತವರ ಸಂಖ್ಯೆ ಐದು ಅಂಕಿಗಳಿಗೇರಿದೆ. ಹಾಗು ಕೋಟ್ಯವಧಿ ರೂಪಾಯಿಗಳ ವಿತ್ತ ಹಾನಿ ಸಂಭವಿಸಿದೆಂದು ವಿಶ್ವಸನೀಯವಾಗಿ ತಿಳಿಯುತ್ತದೆ ಎಂದು ಹುಸೇನ ಇಮಾಮರು ಕೇಳಿದ ಪ್ರಶ್ನೆಗೆ ಉತ್ತರ ಕೊಡುತ್ತ ನಿಸ್ತಾರರು ಹೇಳಿದರು. ಬಿಹಾರದ ಅನೇಕ ಪಟ್ಟಣಗಳಲ್ಲಿ ಸುಮಾರು ೧ ಲಕ್ಷ ನಿರಾಶ್ರಿತರು ಪರಿಹಾರ ಕೇಂದ್ರಗಳಲ್ಲಿ ಹಾಗು ಕೆಲವರ ಮನೆಗಳಲ್ಲಿ ತಲೆಮರೆಸಿಕೊಂಡಿದ್ದಾರೆಂದು ಖಂಡಿತವಾಗಿ ಹೇಳಲಾಗುತ್ತದೆ. ಈ ನಿರಾಶ್ರಿತರ ಸಮಸ್ಯೆ ಬಹುಕಾಲ ನಮ್ಮನ್ನು ಕಾಡುವದೆಂದೂ ಅವರು ಹೇಳಿದರು. ಎರಡು ರಾಜಕೀಯ ಧ್ಯೇಯಗಳ ಬಗ್ಗೆ ಇದ್ದ ವಿವಾದವು ಬೆಳೆಯುತ್ತ ಹೋಗಿ ಜಾತೀಯ ದ್ವೇಷ ತಲೆದೋರಿತು. ಅದರ ಪರಿಣಾಮವಾಗಿ ಕಲ್ಕತ್ತೆಯಲ್ಲಿ ಮುಂಬಯಿಯಲ್ಲಿ ಜಾತೀಯ ದಂಗೆ ಒಟ್ಟು ರಂಭವಾಯಿತು. ಬೇರೆ ಕಡೆಗೆ ದಂಗೆ ನಡೆದ ನಂತರ ಕಲಕತ್ತೆಯಲ್ಲಿ ದುರ್ಘಟನೆ ನಡೆಯಿತು. ಆ ನಗರದ ಎಲ್ಲ ಪಂಗಡಗಳ ಜನರಿಗೂ ಅಪಾರ ಹಾನಿಯಾಯಿತು. ಅಲ್ಲಿಂದ ಬಿಹಾರದಲ್ಲಿಯ ಬಸಿಯಾಬಾದ ಮತ್ತು ಮಾಜಫರಬಾದ ಜಿಲ್ಹೆಗಳಲ್ಲಿ ದಂಗೆ ಪ್ರಾರಂಭವಾದ ಸುದ್ದಿ ಬಂದಿತು. ಅಕ್ಟೋಬರದ ಮಧ್ಯದಲ್ಲಿ ನೌಖಾಲಿಯ ಗಲಭೆ ಪ್ರಾರಂಭವಾಯಿತು. ಕೆಲವೊಂದು ಪಕ್ಷದ ಪತ್ರಿಕೆಗಳ ಅತಿರಂಜಿತ ವರ್ಣನೆಯಿಂದ ಅಲ್ಲಿಯ ಪರಿಸ್ಥಿತಿ ತೀರ ಕೆಟ್ಟಿತು. ಈ ಪ್ರಚಾರದ ಪರಿಣಾಮವಾಗಿ ದೇಶದಲ್ಲಿ ದ್ವೇಷ ಹೆಚ್ಚಿತು. ಬಿಹಾರದಲ್ಲಿ ಹಿಂದೆಂದೂ ನಡೆಯದಿದ್ದ ಅತ್ಯಾಚಾರ ನಡೆಯಿತು. ಇನ್ನೂ ನಡೆಯುತಲಿವೆ. ಗುರುಮುಕ್ತೇಶ್ವರ ಜಾತ್ರೆಯಲ್ಲಿಯೂ ಗಲಭೆ ನಡೆಯಿತು. ನಿರಾಶ್ರಿತರ ಪರಿಹಾರ ಕಾರ್ಯ ನಡೆದಿದೆ ಎಂದು ಮುಂತಾಗಿ ನಿಸ್ತಾರರು ಉತ್ತರಿಸಿದರು.

ನಿಸ್ತಾರರು ತಿಪ್ಪೇರಾ ಜಿಲ್ಹೆಯ ಬಗ್ಗೆ ಏನೂ ಹೇಳಲಿಲ್ಲ ಎಂದು ಪಂಡಿತ ಕುಂಜರುರವರು ಹೇಳಿದ್ದಕ್ಕೆ ಆ ಪ್ರದೇಶವನ್ನು ನಾನಿನ್ನೂ ಸಂಚರಿಸಿಲ್ಲ ಎಂದು ನಿಸ್ತಾರರು ಉತ್ತರಿಸಿದರು ನಿಮ್ಮ ಹೇಳಿಕೆಯಲ್ಲಿ ಉಲ್ಲೇಖಿಸಿದ ಅಹಮದಾಬಾದವನ್ನು ನೀವು ಸಂದರ್ಶಿಸಿರುವಿರಾ ಎಂದು ಕುಂಜರುರವರು ಮತ್ತೆ ಪ್ರಶ್ನಿಸಿದರು. ಇದಕ್ಕೆ ನಿಸ್ತಾರರಿಂದ ಉತ್ತರ ಬರಲಿಲ್ಲ. ಪೂರ್ವ ಬಂಗಾಲದಲ್ಲಿ ನಿರಾಶ್ರಿತರ ಸಂಖ್ಯೆಯೆಷ್ಟು ಎಂದು ಕುಂಜರುರವರು ಮತ್ತೆ ಕೇಳಿದರು. ನಿಶ್ಚಿತ ಸಂಖ್ಯೆ ತಿಳಿದಿಲ್ಲೆಂದು ಇದಕ್ಕೆ ಉತ್ತರ ದೊರೆಯಿತು. ಆ ಪ್ರದೇಶದಲ್ಲಿ ೫೦ ಸಾವಿರದಿಂದ ೧ ಲಕ್ಷದವರೆಗೆ ನಿರಾಶ್ರಿತರಿರುವರೆಂದು ಹೊಣೆಗಾರ ಜನರು ಹೇಳುತಿರುವದು ನಿಮಗೆ ತಿಳಿದಿದೆಯ? ಎಂದು ಕೇಳಿದ್ದಕ್ಕೆ ಇದು ಸಟಿಯೆಂದಾಗಲಿ ದಿಟವೆಂದಾಗಲಿ ಹೇಳುವ ಪರಿಸ್ಥಿತಿಯಲ್ಲಿ ನಾನಿಲ್ಲ ಎಂದು ನಿಸ್ತಾರರು ಹೇಳಿದರು.

#### ಡಾ. ರಾಜೇಂದ್ರರ ಸ್ಪಷ್ಟೋಕ್ತಿ

ಡಾ. ರಾಜೇಂದ್ರ ಪ್ರಸಾದರು ಈ ಸಂಬಂಧದಲ್ಲಿ ಈ ರೀತಿ ಹೇಳಿದರು. ಜಾತೀಯ ದ್ವೇಷವನ್ನು ಹೆಚ್ಚಿಸುವ ಕೆಲಸವನ್ನು ಮಾಡಬಾರದೆಂದು ನಿಸ್ತಾರರು ಹೇಳಿದ್ದನ್ನು ನಾನು ಒಪ್ಪುತ್ತೇನೆ. ಆದರೆ ಈಗ ನಿಸ್ತಾರರು ಕೊಟ್ಟ ಹೇಳಿಕೆಯನ್ನು ಕೇಳಿದರೆ ಭಾರತದಲ್ಲಿ ಸಂಭವಿಸಿದ ದುರ್ಘಟನೆಗಳು ಅತಿ ಭಯಂಕರ ಸ್ವರೂಪದವೆಂದು ಜನರ ಅಭಿಪ್ರಾಯವಾಗುವ ಸಂಭವವಿದೆ. ಬಿಹಾರವನ್ನು ಚೆನ್ನಾಗಿ ಅರಿತ ನಾನು ಅಲ್ಲಿನ ಘಟನೆಗಳನ್ನು ಕಣ್ಣಾರೆ ಕಂಡ ನಾನು ನಿಸ್ತಾರರು ಬಿಹಾರದ ಬಗ್ಗೆ ಹೇಳಿದ್ದನ್ನು ಒಪ್ಪಲಾರೆ. ಬಿಹಾರದ ದುರ್ಘಟನೆಗಳನ್ನು ನಾನು ಅತ್ಯಂತ ಉಗ್ರವಾಗಿ ಖಂಡಿಸುವೆನಾದರೂ ಬಂಗಾಲದಲ್ಲಿಯೂ ಬಿಹಾರದಂಥ ಘಟನೆಗಳು ಸಂಭವಿಸಿವೆಂದು ಹೇಳಬಯಸುತ್ತೇನೆ. ಬಿಹಾರದಲ್ಲಿಯ ದಂಗೆಯ ಪರಿಸ್ಥಿತಿಯನ್ನು ನಾಲ್ಕೈದು ದಿನಗಳಲ್ಲಿ ನಿಯಂತ್ರಿಸಲಾಯಿತು. ಸೈನ್ಯಸಹಾಯ ಇನ್ನೂ ಮುಂಚಿತವಾಗಿ ದೊರೆತಿದ್ದರೆ ಪರಿಸ್ಥಿತಿಯನ್ನು ಈಗಿನಕಿಂತಲೂ ಬೇಗನೆ ಶಾಂತವಾಗಿಸಬಹುದಾಗಿತ್ತು. ಮಹಾತ್ಮರು ಉಪವಾಸವ್ರತ ಕೈಕೊಳ್ಳುವುದಾಗಿ ಸಾರಿದ್ದು ಬಿಹಾರದ ಮೇಲೆ ಒಳ್ಳೆ ಪರಿಣಾಮವನ್ನುಂಟು ಮಾಡಿತು. ಈಗ ಬಿಹಾರದ ಪರಿಸ್ಥಿತಿ ಶಾಂತವಿದೆ. ಪರಿಹಾರಕಾರ್ಯ ನಡೆದಿವೆ. ಶಾಂತ ವಾತಾವರಣವನ್ನು ಹಬ್ಬಿಸಬೇಕೆಂದು ನಾನು ಕೇಳಿಕೊಳ್ಳುತ್ತೇನೆ. ಈಗ ಸಭೆ ಪತ್ರಿಕೆಗಳ ಮೂಲಕ ನಡೆದಿರುವ ಪ್ರಚಾರವು ನಿಂತ ಹೊರತು ಪರಿಸ್ಥಿತಿ ಸುಧಾರಿಸುವ ಆಸೆಯಿಲ್ಲ. ಸಿಕ್ಕವರು ಸಿಕ್ಕಂತೆ ಮಾತಾಡಿ ಪರಿಸ್ಥಿತಿಯನ್ನು ಮತ್ತಷ್ಟು ಕೆಡಿಸದಿರಲಿ. ಬಿಹಾರದಲ್ಲಿ ಮಡಿದವರ ಸಂಖ್ಯೆ ಐದು ಅಂಕಿ ಮುಟ್ಟಿದೆಂದು ಹೇಳುವದು ಅಸಂಬದ್ಧವಾಗಿದೆಂದು ಮುಂತಾಗಿ ಹೇಳಿದರು.

ಬಳಿಕ ವಿಧಿ ಮಂಡಳವು ಎರಡು ಸರಕಾರಿ ಮಸೂದೆಗಳನ್ನು ಪಾಸು ಮಾಡಿದ ನಂತರ ಅನಿಯಮಿತ ಅವಧಿಯ ವರೆಗೆ ಮುಂದರಿಯಿತು.

#### ಮೊದಲಿನ ಸುದ್ದಿ

ಭಾರತದಲ್ಲಿ ವಿಮಾನಗಳನ್ನು ರಚಿಸುವದಕ್ಕಾಗಿ ಬೆಂಗಳೂರಿನಲ್ಲಿಯ ಹಿಂದುಸ್ತಾನ ಏಅರಕ್ರಾಫ್ಟ ಲಿಮಿಟೆಡ್ ಕಾರಖಾನೆಯನ್ನು ಆರಿಸಲಾಗಿದೆ. ಭಾರತ ಸಂರಕ್ಷಣ ಖಾತೆಯು ೫೦ ವಿಮಾನಗಳ ರಚನೆಗಾಗಿ ಹೇಳಿಕೊಂಡಿದ್ದು ಅವುಗಳಲ್ಲಿ ೩೦ ವಿಮಾನಗಳನ್ನು ಬೆಂಗಳೂರಿನ ಕಾರಖಾನೆಯಲ್ಲಿ ತಯಾರಿಸಲಾಗುವದು ಎಂದು ಔದ್ಯೋಗಿಕ ಖಾತೆಯ ಕಾರ್ಯದರ್ಶಿ ಈಟ್ಸರು ಕೇಂದ್ರ ವಿಧಿ ಮಂಡಳದಲ್ಲಿ ಲೆ. ರೂಪಚಂದರು ಕೇಳಿದ ಪ್ರಶ್ನೆಗೆ ೧೯ ನೇ ತಾರೀಕು ಉತ್ತರ ಕೊಡುತ್ತ ಹೇಳಿದರು.

ಪರಧರ್ಮೀಯರನ್ನು ಇಸ್ಲಾಮಕ್ಕೆ ಸ್ವಾಗತಿಸುವದು ಪ್ರತಿಯೊಬ್ಬ ಮುಸಲ್ಮಾನನ ಕರ್ತವ್ಯವಾಗಿದೆಂದು ಮಂತ್ರಿ ಗಜಫರ ಅಲ್ಲಿಖಾನರು ಹೇಳಿದ್ದರ ಸಂಬಂಧದಲ್ಲಿ ಕೇಳಿದ ಪ್ರಶ್ನೆಗೆ ಸಭೆಯ ಧುರೀಣರಾದ ನಿಸ್ತಾರರು ಇಂಥ ವಿಷಯಗಳಲ್ಲಿ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಲು ಮಂತ್ರಿಗಳು ಸ್ವತಂತ್ರರಿರಬೇಕೆಂದು ಉತ್ತರ ಕೊಟ್ಟರು.

ಶ್ರೀಮತಿ ರಾಧಾಬಾಯಿ ಸುಬ್ಬರಾಯನ್‌ರು ಇಂದಿನ ಸಭೆಯಲ್ಲಿ ಸಗೋತ್ರ ವಿವಾಹ ಮಸೂದೆಗನ್ನು ಮಂಡಿಸಿದರು. ಹಲವರ ಭಾಷಣದ ನಂತರ ಅದು ಸ್ವೀಕೃತವಾಯಿತು.

#### ಅವಶ್ಯಕ ಸರಕುಗಳ ನಿಯಂತ್ರಣ

೧೫ ನೇ ತಾರೀಕಿನ ದಿನ ಅವಶ್ಯಕ ಸರಕುಗಳ ಮೇಲೆ ನಿಯಂತ್ರಣ ಹಾಕುವ ಮಸೂದೆಯು ಕೆಲ ಸಮಯದ ಚರ್ಚೆಯ ನಂತರ ಸ್ವೀಕೃತವಾಯಿತು. ಅವಶ್ಯಕ ವಸ್ತುಗಳ ಕೊರತೆಯ ಮೂಲಕ ನಿಯಂತ್ರಣ ಹಾಕುವದವಶ್ಯವಾಗಿದೆಂದು ನಾಗರಿಕ ಪೂರೈಕೆ ಹಾಗು ಔದ್ಯೋಗಿಕ ಖಾತೆಯ ಕಾರ್ಯದರ್ಶಿಗಳು ಹೇಳಿದರು.- ಇವರ ಜತೆಯಲ್ಲಿ ಉತ್ಪಾದನವನ್ನು ಹೆಚ್ಚಿಸುವ ಕಾರ್ಯವನ್ನೂ ಸರಕಾರದವರು ನಡೆಸಬೇಕೆಂದು ಪಂಡಿತ ಕುಂಜರುರವರು ಹೇಳಿದರು.

ಹಣಕಾಸಿನ ಖಾತೆಯ ಕಾರ್ಯದರ್ಶಿಗಳು ಮಂಡಿಸಿದ ಪ್ರಾಮೀಜರಿ ನೋಟುಗಳನ್ನು ಬ್ಯಾಂಕುಗಳು ಹೊರಡಿಸುವದಕ್ಕೆ ತಡೆಹಾಕುವ ಬಗ್ಗೆ ರಿಜರ್ವ ಬ್ಯಾಂಕಿನ ಕಾಯದೆಯ ತಿದ್ದುಪಡಿಯು ಹಾಗು ಗೃಹ ಖಾತೆಯ ಕಾರ್ಯದರ್ಶಿ ಮಿ. ಪೇಟನರರು ಮಂಡಿಸಿದ ಕೇಂದ್ರ ಖಾತೆಗೆ ಸಂಬಂಧಪಟ್ಟ ಕೆಲ ವಿಷಯಗಳ ತಪಾಸಣೆಗಾಗಿ ಸ್ಪೆಶಲ್ ಪೋಲಿಸ ದಳ ಇಡಬೇಕೆಂಬ ಮಸೂದೆ ಇವೆರಡೂ ಸ್ವೀಕೃತವಾದವು.

#### ಗಲಭೆಗಳ ಬಗ್ಗೆ ಧೋರಣ

ಗಲಭೆಗಳ ಬಗ್ಗೆ ನಡುಗಾಲ ಸರಕಾರದ ಧೋರಣವೇನೆಂದು ಮುಂತಾಗಿ ಕೇಳಿದ್ದಕ್ಕೆ ಗೃಹಖಾತೆಯ ಕಾರ್ಯದರ್ಶಿಗಳು ಈ ರೀತಿ ಹೇಳಿದರು- ಪ್ರಾಂತಗಳಲ್ಲಿ ಸಂಭವಿಸುವ ಬರಗಾಲ, ಬಿರುಗಾಳಿ, ಅನಾಹುತ, ಸಾಂಕ್ರಾಮಿಕ ರೋಗ, ಮಹಾಪೂರ ಮೊದಲಾದವುಗಳು ಗೃಹ ಖಾತೆಗೆ ಸಂಭವಿಸಿದ ವಿಷಯಗಳಲ್ಲ. ಕಾಯದೆ ಸುವ್ಯವಸ್ಥೆ ಕಾಯ್ದುಕೊಳ್ಳುವ ಹೊಣೆ ಮುಖ್ಯವಾಗಿ ಪ್ರಾಂತೀಯ ಸರಕಾರದ್ದು. ಕೇಂದ್ರ ಸರಕಾರ ಅದರಲ್ಲಿ ಕೈಹಾಕಬಲ್ಲುದೊ ಇಲ್ಲವೊ ಎಂಬುದು ವಾದಗ್ರಸ್ತ ವಿಷಯ. ಬಂಗಾಲ ಸರಕಾರ ಕೇಂದ್ರ ಸರಕಾರದಿಂದ ನಾನಾ ರೀತಿಯಲ್ಲಿ ಸಹಾಯ ಪಡೆದಿದೆ. ಮುಂದಾದರೂ ಪಡೆಯುವದು. ಗಲಭೆಯ ವಿಷಯದಲ್ಲಿ ನಾವೇಕೆ ಕೈಹಾಕಲಿಲ್ಲೆಂಬುದು ಇದರಿಂದ ಗೊತ್ತಾಗುವದೆಂದೂ ಅವರು ಹೇಳಿದರು.

#### ಕೇಂದ್ರ ಶಾಸನ ಸಭೆ

೧೫ ನೆಯ ತಾರೀಖಿನ ದಿನ ಕೇಂದ್ರ ಶಾಸನ ಸಭೆಯಲ್ಲಿ ಕೇಳಿದ ಪ್ರಶ್ನೆಗೆ ಪಂಡಿತ ಜವಾಹರಲಾಲರು ಉತ್ತರ ಕೊಡುತ್ತ ಘಟನಾ ಸಮಿತಿ ಕೂಡಿದಾಗ ಆ ಸದಸ್ಯರ ರಕ್ಷಣೆಯ ಬಗ್ಗೆ ಸರಕಾರದವರು ಯೋಗ್ಯ ವ್ಯವಸ್ಥೆ ಮಾಡುವರು ಎಂದು ಹೇಳಿದರು. ಸದಸ್ಯರಿಗೆ ಪಿಸ್ತೂಲು ಒದಗಿಸಲಾಗುವದೊ ಎಂದು ಶೇಟ ಗೋವಿಂದದಾಸರು ಕೇಳಿದ್ದಕ್ಕೆ ಪಿಸ್ತೂಲು ಹಿಡಿದು ಅಡ್ಡಾಡುವದು ಆತ್ಮರಕ್ಷಣೆಯ ರೀತಿಯಲ್ಲ. ಪಿಸ್ತೂಲುಧಾರಿಗಳಾಗಿ ಅಡ್ಡಾಡುವದು ಸರಿಯಾದ ಧೋರಣವಲ್ಲ ಎಂದು ಹೇಳಿದರು. ಗುಡ್ಡಗಾಡು ಜನರ ಮೇಲೆ ಬಾಂಬೆಸೆಯಲು ಹಿಂದಿನ ಸರಕಾರವೇ ಅಜ್ಞಾಪಿಸಿತ್ತೆಂದು ಮತ್ತೊಂದು ಪ್ರಶ್ನೆಗೆ ಉತ್ತರ ಕೊಡುತ್ತ ಹೇಳಿದರು. ಕೊಬ್ಬರಿ ಕೊಬ್ಬರಿ ಎಣ್ಣೆಗಳ ಬೆಲೆ ಮಿತಿಮೀರಿ ಏರಿದ್ದರಿಂದ ಅವುಗಳ ಧಾರಣೆಯನ್ನು ನಿರ್ದಿಷ್ಟಪಡಿಸಬೇಕೆಂದು ಕೇಳಿದ್ದಕ್ಕೆ ಕನಿಷ್ಠ ಮತ್ತು ಪರಮಾವಧಿ ಧಾರಣೆಗಳನ್ನು ನಿರ್ಧರಿಸಲಾಗುವದೆಂದು ಉತ್ತರ ಕೊಡಲಾಯಿತು.

ಹಿಂದು ಧಾರ್ಮಿಕ ಪದ್ಧತಿಯಂತೆ ಮದುವೆಯಾಗಿದ್ದರೂ ಹಿಂದಿನಿಂದ ಅವರು ರಜಿಸ್ಟ್ರೇಶನ ಕಾಯದೆಯನ್ವಯ ರಜಿಸ್ಟರ ಮದುವೆ ಮಾಡಿಕೊಳ್ಳಲು ಅವಕಾಶ ಕಲ್ಪಿಸಿಕೊಡುವ ಮಸೂದೆಯನ್ನು ಡಾ. ದೇಶಮುಖರು ಮಂಡಿಸಿದರು. ಈ ಮಸೂದೆಯಲ್ಲಿ ಇನ್ನೂ ಕೆಲವು ತಿದ್ದುಪಡಿಗಳನ್ನು ಮಾಡುವದಿದ್ದುದರಿಂದ ಇದನ್ನು ಪರಿಶೀಲಕ ಸಮಿತಿಗೆ ಒಪ್ಪಿಸಬೇಕೆಂದು ಸೂಚಿಸಿದರು. ಹಲವರು ಅನುಕೂಲ, ಪ್ರತಿಕೂಲ ಭಾಷಣ ಮಾಡಿದರು. ಈ ಮಸೂದೆಯ ಚರ್ಚೆ ಮುಂದಿನ ಅಧಿವೇಶನದಲ್ಲಿ ನಡೆಯುವದು.

#### ಶಸ್ತ್ರಾಸ್ತ್ರಗಳ ಕಾನೂನು ಅನ್ವಯಿಸಬಾರದು

೧೬ ನೇ ತಾರೀಕಿನ ದಿನ ಮನೋರಂಜಕ ಪ್ರಶ್ನೋತ್ತರಗಳು ನಡೆದವು. ನಾಗರಿಕ ರಕ್ಷಕ ದಳದ ಸಂಘಟನೆಯನ್ನು ಒಂದು ಆರ್ಡಿನನ್ಸಿನನ್ವಯ ಮಾಡಲಾಗಿದೆಂದು ಒಂದು ಪ್ರಶ್ನೆಗೆ ಉತ್ತರ ಕೊಡಲಾಯಿತು. ಆಯಾ ಪ್ರಾಂತಿಕ ಸರಕಾರಗಳು ತಮ್ಮ ಮನಸ್ಸಿಗೆ ಬಂದಂತೆ ನಾಗರಿಕ ರಕ್ಷಕದಳಗಳನ್ನು ಸಂಘಟಿಸಬಹುದೆಂದು ಹೇಳಲಾಯಿತು.

ಕೇಂದ್ರಶಾಸನ ಸಭೆ, ವಿಧಿ ಮಂಡಲ, ಘಟನಾ ಸಮಿತಿ, ಪ್ರಾಂತಿಕ ಶಾಸನ ಸಭೆ, ವಿಧಿ ಮಂಡಳ ಇವುಗಳ ಸದಸ್ಯರನ್ನು ಶಸ್ತ್ರಾಸ್ತ್ರ ಕಾನೂನಿನ ಕಕ್ಷೆಯಿಂದ ಹೊರತಾದವರು ಎಂದು ಸಾರಲಾಗುವದೊ ಎಂದು ಕೇಳಿದ್ದಕ್ಕೆ ಸದಸ್ಯರನ್ನು ಈ ಕಾನೂನಿಗೆ ಅಪವಾದ ಮಾಡುವದು ಅಗತ್ಯವೆಂದು ಅನಿಸುವದಿಲ್ಲ. ಆದರೆ ಶಸ್ತ್ರಾಸ್ತ್ರಗಳ ಅಗತ್ಯವಿದೆಂದು ವ್ಯಕ್ತಿಶಃ ಬರುವ ಅರ್ಜಿಗಳನ್ನು ಜಿಲ್ಹಾ ಮತ್ತು ಪ್ರಾಂತಿಕ ಅಧಿಕಾರಿಗಳು ಕೂಡಲೆ ವಿಚಾರಿಸಿ ಅಪ್ಪಣೆ ಕೊಡುವರೆಂದು ವಿಶ್ವಾಸವಿದೆಂದು ಉತ್ತರಿಸಲಾಯಿತು. ಶಸ್ತ್ರಾಸ್ತ್ರ ಮಾರಾಟದ ಮೇಲೆ ಮುಂಬಯಿ ಸರಕಾರದವರು ಹಾಕಿದ ನಿರ್ಬಂಧವನ್ನು ತಿಡ್ದಿಗೆಯುವದವಶ್ಯವೆಂದು ಸರಕಾರದವರಿಗೆ ಎನಿಸುವದೊ ಎಂದು ಕೇಳಿದ್ದಕ್ಕೆ ಪ್ರಾಂತಿಕ ಸರಕಾರಗಳ ಅಧಿಕಾರದಲ್ಲಿ ಕೈಹಾಕುವ ಇಚ್ಛೆಯಿಲ್ಲೆಂದು ಸರದಾರ ವಲ್ಲಭಭಾಯಿಯವರು ಹೇಳಿದರು. ಕಳ್ಳರೂ ದರೋಡೆಗಾರರು ಲಾಯಸೆನ್ಸ ಇಲ್ಲದೆ ಬಂದೂಕು ಇಟ್ಟುಕೊಂಡಿರುವರಲ್ಲವೆ ಎಂದು ಶ್ರೀಪ್ರಕಾಶರು ಕೇಳಿದ್ದಕ್ಕೆ ಕಳ್ಳರೂ ದರೋಡೆಗಾರರೂ ಜನರಲ್ ಲಾಯಸೆನ್ಸ ಪಡೆದಿದ್ದಾರೆ. ಆದರಿಂದ ಲಾಯಸೆನ್ಸ ಇಲ್ಲದೆ ಅವರು ಬಂದೂಕು ಇಟ್ಟುಕೊಳ್ಳುವರು ಎಂದು ಸರದಾರರು ಉತ್ತರ ಕೊಟ್ಟರು: ವಿಮಾನ ಸಾರಿಗೆಯ ರಾಷ್ಟ್ರೀಕರಣದ ಬಗ್ಗೆ ಸರದಾರ ಮಂಗಳಸಿಂಗರು ತಂದ ಮಸೂದೆಯನ್ನು ಸರಕಾರಕ್ಕೆ ಸಮಯ ಕೊಡಬೇಕೆಂದು ಹಿಂತೆಗೆದುಕೊಂಡರು.

ಅವಶ್ಯಕ ವಸ್ತುಗಳ ಮೇಲಿನ ನಿಯಂತ್ರಣವನ್ನು ಹಾಗೆಯೆ ಇಡಬೇಕೆಂದು ತಂದ ಮಸೂದೆ ಸ್ವೀಕರಿಸಲಾಯಿತು. ನಿಯಂತ್ರಣಗಳಿದ್ದರೂ ಅವಶ್ಯಕ ವಸ್ತುಗಳು ಸುಲಭ ಬೆಲೆಯಲ್ಲಿ ತೊಂದರೆಯಿಲ್ಲದೆ ಸಿಕ್ಕುವಂತೆ ನೋಡಿಕೊಳ್ಳಬೇಕೆಂದು ಶ್ರೀ ಕರಮರಕರರು ಈ ವಿಷಯದ ಚರ್ಚೆಯ ಕಾಲಕ್ಕೆ ಹೇಳಿದರು.

ಲಂಚಗುಳಿತನವನ್ನು ಹೆಚ್ಚು ಪರಿಣಾಮಕರವಾಗಿ ಪ್ರತಿಬಂಧಿಸುವ ಮಸೂದೆಯನ್ನು ಸರದಾರ ವಲ್ಲಭಭಾಯರು ಮಂಡಿಸಿದರು. ಸಂಯುಕ್ತರಾಷ್ಟ್ರಗಳ ಪುನರ್ನಿಯೋಜನ ಸಮಿತಿಗೆ ೨ ಕೋಟಿ ರೂಪಾಯಿ ಕೊಡಲು ಸಮ್ಮತಿಯೀಯಬೇಕೆಂದು ವಾಣಿಜ್ಯ ಮಂತ್ರಿಗಳಾದ ಚುಂದ್ರಿಗಾರರು ಮಸೂದೆ ಮಂಡಿಸಿದರು. ಆದರೆ ವಿರೋಧ ಬಹಳಾದ್ದರಿಂದ ಅದನ್ನು ಹಿಂತೆಗೆದುಕೊಳ್ಳಲಾಯಿತು— ಘಟನಾ ಸಮಿತಿಯ ವೆಚ್ಚಕ್ಕೆಂದು ೧೩೪೩೦೦೦ ರೂ. ಬೇಡಿಕೆಯನ್ನು ಅರ್ಥಸಚಿವರು ಮಂಡಿಸಿದರು. ಒಮ್ಮತದಿಂದ ಅದು ಸ್ವೀಕೃತವಾಯಿತು. ಆರ್ಥಿಕ ಮಂತ್ರಿಗಳ ೩೨ ಕೋಟಿ ರೂಪಾಯಿಗಳ ಹಾಗು ರೇಲ್ವೆ ಮಂತ್ರಿಗಳ ೨೫ ಕೋಟಿ ರೂಪಾಯಿಗಳ ಪೂರಕ ಬೇಡಿಕೆಗಳು ಸ್ವೀಕೃತವಾದವು. ೧೮ ನೇ ತಾರೀಕು ಕೇಂದ್ರ ಶಾಸನಸಭೆ ಅನಿಯಮಿತ ಅವಧಿ ವರೆಗೆ ಮುಂದರಿಯಿತು. ಮುಂಗಡ ಪತ್ರಿಕೆಯ ಅಧಿವೇಶನ ಜನೆವರಿ ೨೦ ಕ್ಕೆ ಪ್ರಾರಂಭವಾಗಬಹುದು.

## SALES TAX

### ಮಾರಾಟಗಳ ಮೇಲಿನ ಕರವು

**ಸನ್ ೧೯೪೬ ನೇ ಇಸವಿಯ ಡಿಸೆಂಬರತಿಂಗಳ ೧ನೇ ತಾರೀಕಿನಿಂದ**

ಕರದಿಂದ ಮಾಫು ಮಾಡಲಾದ ಸರಕುಗಳ ಪರಿಶಿಷ್ಟಕ್ಕೆ ಈ ಕೆಳಗಿನ ಸರಕುಗಳನ್ನು ಜೋಡಿಸಬೇಕೆಂದು ಸರಕಾರದವರು ಯೋಚಿಸುತ್ತಾರೆ:—

ವೀಳ್ಯದಲೆ,
ಶೇಂಗಾ, ಕುಸಿಬೆ ಮತ್ತು ಎಳ್ಳು.
ಕೈಯಿಂದ ತೆಗೆದ ಉಣ್ಣೆಯ ನೂಲಿನಿಂದಲೇ ಕೈಮಗ್ಗಗಳ ಮೇಲೆ ನೇಯಲಾದ ಅರಿವೆಯು.
ಹಿಂದುಸ್ತಾನ ಸರಕಾರದ ಕ್ಯಾಂಟೀನ, ಸ್ಟೋರ್ಸ ಡಿಪಾರ್ಟಮೆಂಟಿನಿಂದ ಪಡೆಯಲಾದ ಹಾಗೂ ಆ ಡಿಪಾರ್ಟಮೆಂಟಿನಿಂದ ದಾಖಲೆ ಪಡೆದ ಕ್ಯಾಂಟೀನ ಕಂಟ್ರಾಕ್ಟರರಿಂದ ಬಾದಶಹರವರ ಅಥವಾ ಮಿತ್ರರಾಷ್ಟ್ರಗಳ ಫೌಜುಗಳ ಮೆಂಬರರಿಗೆ ಸದರಿ ಸರಕಾರದಿಂದ ಗೊತ್ತುಮಾಡಲ್ಪಟ್ಟ ಬೆಲೆಗಳಿಗೆ ಮಾರಾಟ ಮಾಡಲಾದ ಸಾಮಾನು.

## ಉಡುಪಿಯಲ್ಲಿ ಮಂತ್ರಿದ್ವಯ

### ದೇವಸ್ಥಾನದಲ್ಲಿ ಹರಿಜನ ಪ್ರವೇಶದ ಪ್ರಚಾರ

ದಕ್ಷಿಣ ಕನ್ನಡ ಜಿಲ್ಹೆಯಲ್ಲಿ ಕಳೆದ ಕೆಲ ದಿನಗಳಲ್ಲಿ ಮೂವರು ಮಂತ್ರಿಗಳು ಸಂಚರಿಸಿ ಹೋದುದು ಅಲಕ್ಷ್ಯಕ್ಕೆ ಗುರಿಯಾಗಿದ್ದ ಈ ಜಿಲ್ಹೆಯ ಕಡೆಗೆ ಮದ್ರಾಸ ಸರಕಾರದ ದೃಷ್ಟಿ ಹೊರಳಿದೆಯೆಂಬದರ ದ್ಯೋತಕವಾಗಿರಬಹುದು. ಜಿಲ್ಹೆಯವರೇ ಆದ ಕಂದಾಯಮಂತ್ರಿ ಶ್ರೀ ಕೆ.ಆರ್. ಕಾರಂತರೂ ಸಾರ್ವಜನಿಕ ಕಾಮಗಾರಿಗಳ ಮಂತ್ರಿಗಳಾದ ಶ್ರೀ ಭಕ್ತವತ್ಸಲಂ ಅವರೂ ಕಳೆದವಾರ ಉಡುಪಿಕ್ಷೇತ್ರಕ್ಕೆ ಚಿತ್ತೈಸಿದ್ದರು. ಸ್ಥಳೀಯ ಸಿನೇಮಾ ಗೃಹದಲ್ಲಿ ಜರಗಿದ ಸಭೆಯಲ್ಲಿ ಅವರಿಬ್ಬರಿಗೆ ನಗರಸಭೆ, ತಾಲೂಕು ವ್ಯಾಪಾರಿ ಸಂಘ, ತಾಲೂಕು ರೈತಸಂಘಗಳ ಮಾನಪತ್ರ ಹಾಗು ಬಿನ್ನವತ್ತಳೆಗಳನ್ನು ಅರ್ಪಿಸಲಾಯಿತು. ಶ್ರೀ ಭಕ್ತವತ್ಸಲಂ ಅವರು ತಮ್ಮ ಇಂಗ್ಲೀ ಷಭಾಷಣದಲ್ಲಿ ಉಡುಪಿಯ ಮಹಿಮೆಯನ್ನು ಹೊಗಳಿದರೂ ನಗರ ಸ್ವಚ್ಛತೆ ಆರೋಗ್ಯಗಳ ಕಡೆಗೆ ಸಾಕಷ್ಟು ಗಮನ ಕೊಡಲಾಗಿಲ್ಲವೆಂದು ಟೀಕಿಸಿದರು; ಮಾನಪತ್ರದಲ್ಲಿ ಮಾಡಲ್ಪಟ್ಟ ಪ್ರಾರ್ಥನೆಗಳಿಗೆ ಸಹಾನುಭೂತಿಪರವಾಗಿ ಉತ್ತರಕೊಡುತ್ತ ಸಂಗಡಲೇ ಅವರು ಶ್ರೀ ಕೃಷ್ಣದೇವಾಲಯದಲ್ಲಿ ಹರಿಜನರಿಗೆ ಪ್ರವೇಶವೀಯುವ ಮಾತೆತ್ತಿದರು. ದೇಶದ ಅನೇಕ ದೇವಸ್ಥಾನಗಳ ಮೇಲ್ಪಂಕ್ತಿಯನ್ನು ಅನುಸರಿಸಿ ಉಡುಪಿಯ ಮಠಾಧಿಪತಿಗಳಾದರೂ ಈ ಸುಧಾರಣೆಗೆ ಮನಸುಮಾಡಬೇಕೆಂದು ಅವರು ಆಶಿಸಿದರು. ಮಾನ್ಯ ಶ್ರೀ ಕೆ. ಆರ್. ಕಾರಂತರು ಅದೇ ಮಾತಿಗೆ ಬೆಂಬಲವೀಯುತ್ತ ಮಠಾಧಿಪತಿಗಳು ಜಾಗ್ರತರಾದರೆ ಹರಿಜನ ಪ್ರವೇಶೋತ್ಸವಕ್ಕೆ ಮುಖ್ಯ ಮಂತ್ರಿ ಟಿ. ಪ್ರಕಾಶಂ ಅವರನ್ನು ಕರೆದು ತರುವ ಪ್ರಯತ್ನ ಮಾಡುವದಾಗಿ ಆಶ್ವಾಸನವಿತ್ತರು.

ಮಾನ್ಯ ಕಾರಂತರು ಇನ್ನೂ ಕೆಲ ವಿಷಯಗಳನ್ನು ಪ್ರಸ್ತಾವಿಸಿದರು. ದಕ್ಷಿಣ ಕನ್ನಡವನ್ನು ಅಲಕ್ಷ್ಯಕ್ಕೆ ಗುರಿಯಾಗುವದಿಲ್ಲೆಂದು ಭರವಸೆಯಿತ್ತು ಇನ್ನೆರಡು ವರ್ಷಗಳಲ್ಲಿ ಪೂರ್ಣ ಮದ್ಯಪ್ರತಿಬಂಧವನ್ನು ಜಿಲ್ಹೆಯಲ್ಲಿ ಆಚರಣೆಗೆ ತರಲಾಗುವದು, ಎಂಬಂಶವನ್ನು ಹೊರಗೆಡಹಿದರು. ನಗರ ಸಭೆಗಳಲ್ಲಿ ಸ್ವಾರ್ಥಪರಾಯಣರು ಸೇರುವದರಿಂದ ಅವುಗಳಿಂದಾಗಬೇಕಾದ ಸೇವೆ ಆಗುತ್ತಿಲ್ಲವೆಂದು ಟೀಕಿಸಿದರು.

ಮಾನ್ಯ ಕಾರಂತರೂ ಭಕ್ತವತ್ಸಲಂ ಅವರೂ ಜಿಲ್ಹೆಯ ಅನೇಕ ಸ್ಥಳಗಳನ್ನು ಸಂದರ್ಶಿಸಿದರು. ಸುರತ್ಕಲ್ಲಿನಲ್ಲಿ ಅವರು ವಿದ್ಯಾದಾಯಿನಿ ಶಾಲೆಯನ್ನು ಸಂದರ್ಶಿಸಿದರಲ್ಲದೆ ಕೂಳೂರು ಹೊಳೆಗೆ ಸೇತುವೆ ಮೊದಲಾದವುಗಳನ್ನು ಬೇಡುವ ಊರವರ ಮನವಿಯನ್ನು ಸ್ವೀಕರಿಸಿದರು. ಗುರುವಾಯನಕೆರೆಗೆ ಶ್ರೀ ಕಾರಂತರು ತಾ ೮ ಕ್ಕೆ ಹೋದಾಗ ಅಲ್ಲಿಯ ಕೆರೆಯನ್ನು ದುರಸ್ತಿಗೊಳಿಸಬೇಕೆಂದು ಊರವರು ಪ್ರಾರ್ಥಿಸಿದರು.

**ಶ್ರೀ ಡೇನಿಯಲ್ ಥಾಮಸರು**

ಸ್ಥಳೀಯ ಸಂಸ್ಥೆಗಳ ಮಂತ್ರಿಗಳಾದ ಶ್ರೀ ಡೇನಿಯಲ ಥಾಮಸರು ತಾ ೧೦ ಕ್ಕೆ ಮಂಗಳೂರಿಗೆ ಆಗಮಿಸಿದರು. ನಗರ ಸಭೆ ಅವರಿಗೆ ಮಾನಪತ್ರವನ್ನು ಅರ್ಪಿಸಿತು. ನಗರದ ನೀರಿನ ಯೋಜನೆ ನೈರ್ಮಲ್ಯ ಮೊದಲಾದ ವಿಷಯಕ್ಕೆ ಮಾನಪತ್ರದ ಸೂಚನೆಗಳಿಗೆ ಅವರು ಯೋಗ್ಯ ಉತ್ತರವಿತ್ತರು. ಅಲ್ಲಿಂದ ಅಲೋಸಿಯಸ್ ಕಾಲೇಜಿಗೆ ದರ್ಶನವಿತ್ತು "ರಾಷ್ಟ್ರೀಯತೆ ಮತ್ತು ಸಮಾಜಗಳು" ಎಂಬ ವಿಷಯದಲ್ಲಿ ಭಾಷಣವಿತ್ತರು. ಹರಿಜನ ಲೇಬರ ಶಾಲೆಗೆ ಭೆಟ್ಟಿಕೊಟ್ಟು ಶ್ರೀ ಈಶ್ವರನ್ನರು ಅರ್ಪಿಸಿದ ಬಿನ್ನವತ್ತಳೆಯನ್ನು ಸ್ವೀಕರಿಸಿದರು. ಅದರಲ್ಲಿ ಹರಿಜನರ ಪರವಾಗಿ ಕೆಲ ಬೇಡಿಕೆಗಳನ್ನು ಮುಂದೊಡ್ಡಲಾಗಿತ್ತು. ಎಲೋಸಿಯಸ್ ಕಾಲೇಜಿನ ವಿದ್ಯಾರ್ಥಿ ಸಂಘದಲ್ಲಿಯೂ ಅವರು ಭಾಷಣಮಾಡಿದರು.




### ಮುಂಬಯಿ ಶೇರ ಪೇಟೆ

ತಾ. ೨೦

ಮುಂಬಯಿ ಶೇರ ಪೇಟೆಯಲ್ಲಿ ಕಳೆದ ವಾರವೆಲ್ಲ ಏರಿಕೆಯ ಧೋರಣೆ ಕಂಡುಬಂದು ಈ ಮಂಗಳವಾರ ಅದು ಪರಮಾವಧಿಗೆ ಮುಟ್ಟಿತಾದರೂ ಇಂದು ಮತ್ತೆ ಕೆಳಮುಖವಾಗಿ ಬಿಟ್ಟಿತು. ಟಾಟಾ ಸ್ಟೀಲ ಡೆಫರ್ಡ ಪಾಲು ೨೯೨೫-೦-೦ ರಲ್ಲಿ (ಕಳೆದವಾರದ ವರದಿ ಕಾಲಕ್ಕೆ) ಇದ್ದುದು ೩೦೦೦-೦-೦ ದ ಮೇರೆಯನ್ನು ಹಾಯ್ದು ೩೦೦೭-೮-೦ಗೆ ಹೋಗಿ ೨೯೯೨-೦-೦ಕ್ಕಿಳಿಯಿತು. ಆದು ಕೆಲದಿನಗಳಿಂದ ಬಾಂಬೇ ಡಾಯಿಂಗ ಪಾಲುಗಳಿಗಿಂತ ಹಿಂದೆ ಬಿದ್ದದ್ದು ಪುನಃ ಅದಕ್ಕಿಂತ ಮುಂದೆ ಹೋಗಿದೆ. ಡಾಯಿಂಗ ೨೯೬೫-೦-೦ಕ್ಕೇರಿ ೨೯೩೦-೦-೦ಕ್ಕೆ ಬಂತು. ಫಿನ್ಲೇ ೪೨೬-೦-೦ಕ್ಕೇರಿ ೪೨೨-೮-೦ ಕ್ಕೂ ಕೋಹಿನುರು ೯೬೧-೦-೦ ಕ್ಕೇರಿ ೯೫೯ ಕ್ಕೂ ಸ್ವದೇಶಿ ೭೭೫ ಕ್ಕೇರಿ ೭೭೦-೦-೦ಕ್ಕೂ ಗೊಕಾಕ ೪೦೪-೮-೦ ಕ್ಕೇರಿ ೪೦೧-೦-೦ಕ್ಕೂ ಇಳಿದವು. ಸಿಂಧ್ಯ ಸ್ಟೀಮ ೪೯-೧೪-೦ಕ್ಕೇರಿ ೪೯-೧೧-೦ಕ್ಕೆ ಬಂದರೆ ಅಸೋಸಿಯೆಟೆಡ ಸಿಮೆಂಟ್ಸ ೨೪೫-೦-೦ ರಿಂದ ೨೪೪-೦-೦ಕ್ಕೆ ಬಂತು. ಆದರೆ ಒಟ್ಟಿನ ಮೇಲೆ ಕಳೆದ ವಾರದ ಮಟ್ಟಕ್ಕಿಂತ ಈ ವಾರದ ಮಟ್ಟ ಏರಿಕೆಯಲ್ಲಿಯೆ ಇದೆ. ಬ್ಯಾಂಕುಗಳಲ್ಲಿ ಸೆಂಟ್ರಲ ಬ್ಯಾಂಕು ಇತರ ಪಾಲುಗಳೊಡನೆ ಇಂದು ಇಳಿಯದೆ. ೧೩೩-೦-೦ಕ್ಕೇರಿತು. ಇಂಪೀರಿಯಲ್ ಎಸ್. ಬಿ. ಮಾತ್ರ ೨೮೬೫-೦-೦ಕ್ಕೇರಿ ತುಸು ಹಿಂದೇಟು ತಿಂದು ೨೮೬೦-೦-೦ಕ್ಕೆ ಬಂತು. ರಿಝರ್ವ ಬ್ಯಾಂಕು ೧೫೪-೦-೦ರ ಸುತ್ತ ಇದೆ.

ಸರಕಾರಿ ಪತ್ರಗಳಲ್ಲಿ ಹೊಸತಾಗಿ ಹೊರಡಿಸಲ್ಪಟ್ಟ ೨। ಬಡ್ಡಿಯ ಸಾಲದಿಂದ ಹಣ ತೊಡಗಿಸುವವರಿಗೆ ತೃಪ್ತಿಯಾಗಿಲ್ಲವೆನ್ನಬಹುದು. ಜಿ. ಪಿ. ನೋಟುಗಳು ೧೦೪-೧೪-೦ಯಲ್ಲಿ ಸ್ಥಿರವಾಗಿವೆ. ೧೯೪೭-೫೦ರ ಸಾಲ ೧೦೨-೦-೦ರಲ್ಲಿ ಇದೆ.

### ಚಿನ್ನ ಬೆಳ್ಳಿ

ಚಿನಿವಾರ ಕಟ್ಟೆಯಲ್ಲಿ ಚಿನ್ನ ಈ ವಾರ ತುಸು ಏರಿತು. ಅದೀಗ ೧೦೧-೮-೦ಕ್ಕೇರಿದೆ. ಹೊಸ ಚಿನ್ನ ೯೧-೧೦-೦. ಸಾವರೀನು ೬೭-೧೨-೦ ಬೆಳ್ಳಿ ಮಾತ್ರ ೧೫೫-೦-೦ ರಿಂದ ೧೫೨-೦-೦ಕ್ಕಿಳಿದಿದೆ. ವಾಯದಾ ೧೪೪-೬-೦ ಬುಲಿಯನ್ ಏಕ್ಸಚೇಂಜಿನಲ್ಲಿರುವ ಅವ್ಯವಸ್ಥಿತ ಪರಿಸ್ಥಿತಿಯನ್ನು ಹಿಡಿತಕ್ಕೆ ತರಲು' ಮುಂಬಯಿ ಸರಕಾರ ಕ್ರಮ ಕೈಕೊಳ್ಳಬಹುದೆಂದು ತಿಳಿಯುತ್ತದೆ.

### ಅರಳೆ

ಅಕಾಲ ವೃಷ್ಟಿಯಿಂದ ಈ ವರ್ಷದ ಅರಳೆ ಉತ್ಪಾದನೆ ಪರಿಮಾಣದಲ್ಲಿಯೂ ಯೋಗ್ಯತೆಯಲ್ಲಿಯೂ ಇಳಿದುಹೋಗಬಹುದೆಂಬ ಭೀತಿ ಆವರಿಸಿದೆ. ಆದರಿಂದ ಅರಳೆ ಧಾರಣೆ ತುಸು ಏರಿಕೆ ತೋರಿದೆ. ಜನೇವರಿ ಅರಳೆ ೪೫೮-೧೦-೦ ರಿಂದ ೪೬೧-೦-೦ ಕ್ಕೇರಿತು. ಮಾರ್ಚ ೪೬೮-೮-೦ ರಲ್ಲೂ ಮೇ ೪೭೬-೦-೦ ರಲ್ಲ-ಜುಲೈ ೪೮೪-೦-೦ರಲ್ಲೂ ಸಪ್ಟೆಂಬರ ೪೯೦-೦-೦ ರಲ್ಲೂ ಇವೆ.

### ಎಣ್ಣೆ ಕಾಳು

| | |
|---|---|
| ಶೇಂಗಾ | ೧೧೪-೦-೮ |
| ಅಗಸಿ | ೨೩-೨-೮ |
| ಅಗಸಿ ಎಣ್ಣೆ | ೧೫-೧೪-೦ |

### ಶಿವಮೊಗ್ಗ

| | | |
|---|---|---|
| ಅಡಿಕೆ ದೇಶಾವರ ನಂ ೧ಮಣ ೧ಕ್ಕೆ | | ೩೫-೪೮ |
| ,, ,, | ೨ | ೩೨-೩೬ |
| ರಾಜಾ ಅಲವು | | ೩೨-೩೬ |
| ತೊರಸಾಲು | | ೩೩-೩೬ |
| ಬೆಟ್ಟೆ | | ೨೩-೨೫ |
| ಬೆಟ್ಟೆ ವಂತಿ | | ೨೫-೨೭ |
| ಸುಲಿ | | ೩೫-೩೯ |

### ಸಾಂಗಲಿ ಪೇಟೆ

| | |
|---|---|
| ಬೆಲ್ಲ ಬಂಗಾಲಿ ಮಣ ರೂ. | ೧೧೫ |
| ಅರಿಷಣ ಹೇರು | ೯೨-೯೩॥ |
| ಶೇಂಗಾ ಖಂಡಿ ,, | ೭೫-೮೫ |
| ಮೆಣಸಿನಕಾಯಿ ಹೇರು ,, | ೧೨೫-೧೮೦ |
| ಮಿರ್ಜಿ ತಂಬಾಕು ಹೇರು | ೧೦೦-೨೨೫ |

## ಮೈಸೂರು-ಬೆಂಗಳೂರು

ಮೈಸೂರು ಸಂಸ್ಥಾನ ಮಹಿಳಾ ಪರಿಷತ್ತಿನ ೨೦ನೇ ಅಧಿವೇಶನ ಬೆಂಗಳೂರಲ್ಲಿ ದಿವಾಣ ರಾಮಸ್ವಾಮಿ ಮುದಲಿಯಾರರ ಪತ್ನಿ ಶ್ರೀಮತಿ ಮುದಲಿಯಾರರ ಅಧ್ಯಕ್ಷತೆಯಲ್ಲಿ ನೆರವೇರಿತು. ಅಧ್ಯಕ್ಷರು ಸ್ತ್ರೀ ಶಿಕ್ಷಣದ ಕಡೆ ಸರಕಾರವೂ ಸಾರ್ವಜನಿಕರ ಸಂಸ್ಥೆಗಳೂ ಹೆಚ್ಚು ಲಕ್ಷ್ಯಕೊಡಬೇಕೆಂಬ ಅಭಿಪ್ರಾಯದ ಭಾಷಣ ಮಾಡಿದರು. ಬಂಗಾಲ-ಬಿಹಾರ ಸಂತ್ರಸ್ತರಲ್ಲಿ ಸಹಾನುಭೂತಿ ತೋರುವ, ಯುಕ್ತರಾಷ್ಟ್ರ ಸಂಘಕ್ಕೆ ಪ್ರತಿನಿಧಿಯಾಗಿ ಹೋದ ಶ್ರೀಮತಿ ವಿಜಯಲಕ್ಷ್ಮಿಯವರನ್ನು ಅಭಿನಂದಿಸುವ, ಸ್ತ್ರೀಯರ ಹಕ್ಕುಗಳಿಗೆ ಸಂಬಂಧಿಸಿದ ಹಿಂದೂ ಕಾಯದೆಯನ್ನು ತಿದ್ದಬೇಕೆಂದು ಬೇಡುವ ಹಾಗು ಪಂ. ಮಾಲವೀಯರ ನಿಧನಕ್ಕೆ ಪರಿತಾಪ ಸೂಚಿಸುವ ಗೊತ್ತುವಳಿಗಳಾದವು.

ಮೈಸೂರು ಕಾಂಗ್ರೆಸ್ ಕಾರ್ಯ ಸಮಿತಿಯ ತಾ. ೧೭-೧೮ರ ಸಭೆಗಳಲ್ಲಿ ಘಟನಾ ಸಮಿತಿಯ ಸಂಸ್ಥಾನ ಸಂಧಾನ ಸಮಿತಿಯಲ್ಲಿ ಪ್ರಜಾ ನಿಯುಕ್ತರ ಸಂಖ್ಯೆ ಅಧಿಕವಾಗಿರಬೇಕು ಅದಾಗದಿದ್ದರೆ ಘಟನಾ ಸಮಿತಿಯನ್ನೇ ಮುಂದೂಡಬೇಕೆಂಬ; ಕೋಲಾರದಲ್ಲಿ ನಡೆದ ಗಲಭೆಗಳು ಸ್ವಾರ್ಥಸಾಧಕರ ಕೈವಾಡದಿಂದಾಗಿದ್ದು ಕೂಲಿಕಾರರು ತಾಳ್ಮೆಯಿಂದಿರಬೇಕೆಂದು ಪ್ರಾರ್ಥಿಸುವ ಗೊತ್ತುವಳಿಗಳಾದವು.

ತಾ. ೧೫ಕ್ಕೆ 'ಬೆಂಗಳೂರ ರೋಟರಿ ಸಂಘದ ಸಭೆಯಲ್ಲಿ ತಿರ್ವಾಂಕೂರು ದಿವಾಣರಾದ ಸರ್ ಸಿ. ಪಿ. ರಾಮಸ್ವಾಮಿ ಅಯ್ಯರರು "ಘೋಷಣೆಗಳು" ಎಂಬ ವಿಷಯದಲ್ಲಿ ಭಾಷಣ ಮಾಡುತ್ತ ಅಪಾಯಕರ ಘೋಷಣೆಗಳಿಂದ ಈಗ ದೇಶಕ್ಕೆ ಅಹಿತವಾಗುವದೆಂದು ವಿವರಿಸುತ್ತ ಕಾಂಗ್ರೆಸ್ಸಿನ "ಸಾಯಮನ್ ಗೋಬ್ಯಾಕ್" "ಕ್ವಿಟ್ ಇಂಡಿಯಾ" "ಖಾದಿ" ಘೋಷಣೆಗಳನ್ನು ಟೀಕಿಸಿದ್ದಲ್ಲದೆ ಕಮ್ಯುನಿಷ್ಟರು ತಮ್ಮ ಸಂಸ್ಥಾನದಲ್ಲಿ ನಡೆಸಿದ ತಲೆ ಕೆಳಗೆಮಾಡುವ ಚಳವಳಿಯನ್ನು ಟೀಕಿಸಿದರು. ಪಾಕಿಸ್ತಾನ ಅಸಾಧ್ಯ ಅಪಾಯಕರವೆಂದರು. ಕೇರಳ ಪ್ರಾಂತ ರಚನೆಯಲ್ಲಿ ತಿರ್ವಾಂಕೂರು ಕೊಚ್ಚಿಗಳನ್ನು ಬ್ರಿಟಿಶ ಜಿಲ್ಹೆಯಾದ ಮಲಬಾರು ಆಳುವ ಆಸೆಯಿಟ್ಟಿರುವದರಿಂದ ಅದಕ್ಕೆ ತಮ್ಮ ಒಪ್ಪಿಗೆಯಿಲ್ಲವೆಂದರು.

| | | |
|---|---|---|
| ತಂಬಾಕ ಪಂಢರಪುರಿ | ,, | ೧೫೦-೨೫೦ |
| ತಂಬಾಕು ಅಕೋಳ(ಹೇರು) | | ೨೫೦-೩೭೫ |

### ಹುಬ್ಬಳ್ಳಿ ಪೇಟೆ

| | | |
|---|---|---|
| ಜಯವಂತ ಹತ್ತಿ | ನಂ. ೧ | ೨೮೦-೨೮೫ |
| ,, | ನಂ. ೨ | ೨೭೦-೨೭೫ |
| ,, | ನಂ. ೩ | ೨೬೦-೨೬೫ |
| ಅಪ್ಲೆಂಡ ಹತ್ತಿ | | ೨೬೦-೨೬೫ |
| ಜಿನ | | ೨೦೦-೨೦೫ |
| ಸಾಜಿನ | | ೧೮೦-೧೯೫ |
| ಡಬಲರೋಲ | | ೧೯೦-೧೯೫ |









# ಆ ನನ್ನ ಬಾಲ ಭಿಕ್ಷುಕಿ

ಬರೆದವರು— ಪಿ. ಟಿ. ಕುಲಕರ್ಣಿ, ವಿಲಿಂಗ್ಡನ ಕಾಲೇಜ ಸಾಂಗಲಿ

ಅಂದು ಸ್ಟೇಶನದಲ್ಲಿ ಜನದಟ್ಟಣೆ ವಿಶೇಷವಿತ್ತು. ಗಾಡಿ ನಿಲ್ದಾಣದಲ್ಲಿ ಬಂದು ನಿಂತೊಡನೆ ಪ್ರಯಾಣಿಕರು ತಮ್ಮ ಗಂಟುಗದಡಿಗಳನ್ನು ಕಟ್ಟಿಕೊಂಡು ನುಗ್ಗಿದರು. ಇಳಿಯುವ ಮತ್ತು ಹತ್ತುವ ಜನಗಳ ನಡುವೆ ಒಂದು ದೊಡ್ಡ ಸಂಘರ್ಷವೇ ಉತ್ಪನ್ನವಾಯಿತು. ಟ್ರಂಕು ಟ್ರಂಕಿಗೆ ಘಟ್ಟಿಸುವದು, ಬಾಯಿಬಾಯಿಗೆ ಹತ್ತುವದರಿಂದ ಉಂಟಾದ ನಾದ ಎಂಜಿನಿನ ಕೂಗನ್ನು ಮುಚ್ಚಿಬಿಟ್ಟಿತು. ನನಗೆ ಗಾಡಿಯೊಳಗೆ ನಿಲ್ಲಲು ಸಹ ಸ್ಥಳ ದೊರೆಯಲಿಲ್ಲ. ಹೊರಗೆ ಕಾಲು-ಮಣೆಯ ಮೇಲೆ ನಿಂತುಕೊಂಡೆ. ಮೊದಲನೆಯ ಗಂಟೆಯಾಯಿತು. ಗಾಡಿ ಬಿಡಲು ಇನ್ನು ಹತ್ತು ನಿಮಿಷ ಉಳಿದಂತಾಯಿತು. ನನ್ನದು ಸ್ವಲ್ಪ ಕವಿಯ ಕಣ್ಣು. ಈ ಬಗೆಯ ಗೊಂದಲದಲ್ಲಿಯೂ ತಿಕ್ಕಾಟದಲ್ಲಿಯೂ ನನ್ನ ಮನಸ್ಸು ಪ್ರಕ್ಷುಬ್ಧಗೊಳ್ಳದೆ ಕಲ್ಪನಾಸಾಗರದಲ್ಲಿ ಲೋಲಾಡುತ್ತಿದ್ದಿತು. ಈ ತರಹದ ದೃಶ್ಯಗಳು ನನ್ನ ಕವಿತ್ವಕ್ಕೆ ಅನ್ನವಾಗುವವೆಂದು ಹಿಗ್ಗಿದೆ. ಹೀಗೆ ನಾನು ಕಲ್ಪನೆಯಲ್ಲಿ ತೇಲುತ್ತಿದ್ದಾಗ, ನನ್ನ ಮೇಲೆ ನಾಲ್ಕಾರು ಜನ ತೇಲಿ ಬಂದು ಎಚ್ಚರಗೊಳಿಸಿದರು. ಆಗ ನಿಜ ಜಗತ್ತಿನ ನೋವು ಬೆನ್ನ ಮೇಲೆ ಸರಿಯಾಗಿ ಆಯಿತು. ಯಾರ ಮೇಲೆಯೂ ಕೆರಳಿ ಕೆಳಗಿಳಿಯುವಂತಿಲ್ಲ. ಸಿಕ್ಕ ಸ್ವಲ್ಪ ಜಾಗೆಯೂ ಹೊರಟು ಹೋಗುವದು ಎರಡನೆಯವರ ಪಾಲಾಗಿ. ಏನಾದುದೆಲ್ಲವನ್ನೂ ಸಹಿಸಿ ಸುಮ್ಮನೆ ಕಲ್ಲುದೇವರ ಹಾಗೆ ಎರಡನೆಯ ಗಂಟೆ ಸಪ್ಪಳವನ್ನು ಕೇಳುತ್ತ ನಿಂತೆ. ಗಾಡಿ ಚಲಿಸತೊಡಗಿತು. ಆ ವೇಳೆಗೆ ಸರಿಯಾಗಿ ಭಿಕ್ಷುಕಿಯೊಬ್ಬಳು, ತನ್ನ ಆರು ವರ್ಷದ ಚಿಕ್ಕ ಮಗಳನ್ನು ಕೈಹಿಡಿದು ಕರಕೊಂಡು ಓಡುತ್ತ ಬಂದು, ಹತ್ತಿರದಲ್ಲಿಯೇ ಬಂದ ಎರಡನೇ ವರ್ಗದ ಡಬ್ಬಿಯಲ್ಲಿ ನಸುಳಿಬಿಟ್ಟಳು. ಪಾಪ! ಹುಡುಗಿಯೊಂದೇ ಕೆಳಗುಳಿಯಿತು. ತಾಯಿಯಿಂದ ತನ್ನ ಅಗಲಿಕೆಯಾಗುವುದೆಂದು ಕಂಡೊಡನೆ, ಬಲವಾಗಿ ನಡುಗಿ, ಅವಳು ಬೀಳುತ್ತೇಳುತ್ತ ಅದೇ ಡಬ್ಬಿಯನ್ನು ಹತ್ತುವದಕ್ಕೆ ಪ್ರಯತ್ನ ಮಾಡುವುದರಲ್ಲಿದ್ದಳು. ಹರಕು ಅರಿವೆಯ ಈ ಬಡ ಹುಡುಗಿ ಪೋರ್ಟರನೊಬ್ಬನ ದೃಷ್ಟಿಗೆ ಬಿದ್ದುದೊಂದೇ ತಡ, ಅವನು ಇವಳನ್ನು ಝುರ್ರನೇ ನೆಲಕ್ಕೆಳೆದುಬಿಟ್ಟನು. ದುಃಖ ಪ್ರೊತ್ತರಿಸಿ ಬಂದು ಹುಡುಗಿ 'ಅಮ್ಮಾ, ಅಮ್ಮಾ' ಎಂದು ಒರಲುತ್ತ ಗಾಡಿಯ ಸಂಗಡಲೇ ಓಡಿದಳು. ಆದರೆ ಗಾಡಿಯು—ಮಮತೆಯ ತಾಯಿಯನ್ನು ಕಟ್ಟಿಕೊಂಡು—ಸಿಕ್ಕೇನೆಂದು ಜೋರಿನಿಂದು ಓಡುವ ಕಳ್ಳನಂತೆ ವೇಗವಾಗಿ ಹೊರಟು ಹೋಯಿತು. ಮುಂದೇನಾಯಿತೋ ನನಗೆ ತಿಳಿಯಲಿಲ್ಲ. ಆ ಹುಡುಗಿಯ ಕರುಣಾಜನಕ ಸ್ವರ ಮಾತ್ರ ನನ್ನ ಕಿವಿಯಲ್ಲಿ ಒಂದೇ ಸವನೆ ದನಿಗೊಡುತ್ತಿತ್ತು. ಕಾಲೇಜಿನಲ್ಲಿ ಪ್ರೊಫೆಸರರ ಉಪನ್ಯಾಸವೆಲ್ಲ ಗಾಳಿಯಲ್ಲಿಯೇ ಅಡಗಿ ಹೋಯಿತು. ನನ್ನ ಕಿವಿಯಲ್ಲಿ ಕೇಳಬರುತ್ತಿದ್ದುದು ಒಂದೇ ಒಂದು ಸ್ವರ "ಅಮ್ಮಾ ಅಮ್ಮಾ" ಎಂಬ ಆ ಹುಡುಗಿಯ ಕೂಗು. ಆ ಕೂಗಿನ ಸುತ್ತಲೂ ಒಂದು ಕರುಣೆಯ ಚಿತ್ರ ಮೂಡಿತು.

* * *

ಈ ಸಂಗತಿ ಸಂಭವಿಸಿ ಹದಿನೈದು ದಿನಗಳು ಗತಿಸಿದವು. ಆ ಹುಡುಗಿ ಪ್ರತಿನಿತ್ಯವೂ ನಮ್ಮ ಮನೆಗೆ ಭಿಕ್ಷೆಗಾಗಿ ಬರುತ್ತಿದ್ದಳು. ಅವಳ ಇಂಪಾದ ದನಿಯು ನನ್ನ ದಣಿದ ಹೃದಯಕ್ಕೆ ಪಾನೀಯದಂತಿರುತ್ತಿತ್ತು. ಅನ್ನ-ಬಟ್ಟೆಗಳ ಕೊರತೆಯಿದ್ದಿತಾದರೂ ಗಾನದೇವಿಯು ಅವಳಿಗೆ ಒಲಿದಂತಿತ್ತು. ಅವಳ ಸಾದಾ ಮಾತುಗಳಲ್ಲಿಯೂ ಗಾನಮಾಧುರ್ಯವಿರುತ್ತಿತ್ತು. ಅಮ್ಮನಿಗೆ ಕಾಣದ ಹಾಗೆ ಒಂದು ತುತ್ತು ಅನ್ನ ಹೆಚ್ಚಾಗಿಯೇ ತಂದು ಭಿಕ್ಷೆ ನೀಡುತ್ತಿದ್ದೆ. ಆಗಾಗ ಕಾಸೆರಡು ಕಾಸು ಕೊಡುತಿದ್ದೆ. ತಾಸೆರಡು ತಾಸು ಅವಳನ್ನು ಕೂಡಿಸಿಕೊಂಡು ಹಾಡು ಕೇಳುತ್ತಿದ್ದೆ. "ಇಷ್ಟು ಹಾಡುಗಳನ್ನೆಲ್ಲ ಯಾರು ಕಲಿಸಿದರಮ್ಮಾ ನಿನಗೆ?" ಎಂದು ಒಮ್ಮೆ ಕೇಳಿದೆ. ಆಗ ಅಮ್ಮನ ನೆನಪಾಗಿ ಆ ಹುಡಿಗಿ ಬಿಕ್ಕಿ ಬಿಕ್ಕಿ ಅಳುತ್ತ, "ಅಮ್ಮಾ" ಎಂದಿಷ್ಟೇ ಹೇಳಿ ಕಣ್ಣೀರು ಸುರಿಸಿದಳು.

ಭಿಕ್ಷುಕ-ಹುಡುಗಿ ತಾಯಿಯನ್ನಗಲಿದಂದಿನಿಂದ ಇವೊತ್ತಿಗೆ ಹದಿನೈದನೆಯ ದಿನ. ಮಧ್ಯಾಹ್ನ ಹನ್ನೊಂದಾಗಿತ್ತು. ಹತ್ತು ಗಂಟೆಗೇ ಬರುತ್ತಿದ್ದ ಹುಡುಗಿ ಇಂದೇಕೆ ತಡಮಾಡಿದಳೆಂದು ನಾನು ಚಿಂತಾಕುಲಹೃದಯನಾಗಿ ಅತ್ತಿತ್ತ ಶತಪಥ ತಿರುಗುತ್ತಿದ್ದೆ. ದೂರದಿಂದ ಓಡುತ್ತ ಓಡುತ್ತ ಬರುತ್ತಿದ್ದ ಹುಡುಗಿ ಕಾಣಿಸಿದಳು. ಓಡಿ ಬರುವುದರ ಕಾರಣ ತಿಳಿಯದಾಯಿತು. ಒಂದೇ ಸವನೆ ತೇಕುತ್ತ ನನ್ನ ಹತ್ತಿರ ಬಂದು ನಿಂತಳು. ನಾನವಳ ರಕ್ಷಕನಾಗಿರುವೆನೆಂದು ಅವಳ ಭಾವನೆಯಾಗಿರಬೇಕು.

"ಏನಾಯಿತಮ್ಮಾ ಓಡಿ ಬಂದೆ? ತಡವೇಕಾಯಿತು ಇಂದು?" ಕೇಳಿದೆ.

"ಆ ಉಳಿದ ಭಿಕ್ಷುಕರನ್ನು ನಾನು ಕೂಡಿಕೊಂಡಿಲ್ಲವೆಂದು ಅವರು ನನ್ನನ್ನು ಹೊಡೆದು ಬಡೆದು ಗೋಳಾಡಿಸಿದರು. ನಾನು ತಂದ ಅನ್ನವನ್ನೆಲ್ಲ ಅವರ ಅನ್ನದಲ್ಲಿ ಸೇರಿಸಬೇಕೆಂದು ಕೇಳಿದರು. ನಾನದಕ್ಕೆ ಒಪ್ಪದ್ದಕ್ಕೆ ನನ್ನನ್ನೀಪರಿ ಹೊಡೆದರು. ನಾನೇನೂ ತಪ್ಪು ಮಾಡಿಲ್ಲ. ಆದರೂ ಜನ ನನ್ನನ್ನು ಹೊಡೆಯುತ್ತಾರೆ. ನನ್ನಷ್ಟಕ್ಕೆ ನಾನಿದ್ದರೂ ಅವರಿಗೆ ಸೇರಿಕೆಯಿಲ್ಲ. ಅವರ ಹೊಲಸುತನ ನನಗೆ ಸೇರುವುದಿಲ್ಲ. ಅಮ್ಮಾ— ನಾನು ಯಾವಾಗಲೂ ಅವರಿಂದ ದೂರವೇ ಇರುತ್ತಿದ್ದೆವು. ಅಮ್ಮನಿಲ್ಲದ್ದಕ್ಕೆ ಎಲ್ಲರೂ ನನ್ನನ್ನು ಗೋಳಾಡಿಸುವರು" ಎಂದು ದುಃಖಿಸಿದಳು.

"ಹೆದರಬೇಡಮ್ಮಾ, ಮಗು. ಈ ದಿನ ಇಲ್ಲಿಯೇ ಇದ್ದುಬಿಡು. ಹೊರಗೆ ಎಲ್ಲಿಯೂ ಹೋಗಬೇಡ." ಹಾಡುವ ಹುಡುಗಿ ಸಿಕ್ಕದ್ದಕ್ಕೆ ನನಗೆ ಆ ದಿನ ಆನಂದವೇ ಆನಂದ. ಇಡೀ ದಿನವೆಲ್ಲ ಅವಳ ಹಾಡು ಕೇಳಿದೆ. ಈ ಗಾನರತ್ನವನ್ನು ತಿರುಕರ ಹೊಟ್ಟೆಯಲ್ಲಿ ಹುಟ್ಟಿಸದೆ, ನಮ್ಮಂಥ ಒಬ್ಬರ ಮನೆಯಲ್ಲಿ ಹುಟ್ಟಿಸಿದ್ದರೆ ದೇವರು—ಎಂಬ ಯೋಚನೆಯು ಸುಳಿದು ಹೋಯಿತು.

ರಾತ್ರಿ ಬಾಗಿಲ ಬಳಿಯಲ್ಲಿ ಮಲಗಿದಳು. ಕೆಟ್ಟ ಕನಸು ಕಂಡು ಮಧ್ಯರಾತ್ರಿಯಲ್ಲಿ ಚಿಟ್ಟನೆ ಚೀರಿದಳು. ನನಗೆ ಎಚ್ಚರವಾಗಿ, ದೀಪ ಹಿಡಿದು ನೋಡಿದೆ. ಅದೇ ಆ ನಿರ್ಮಲ ಮುಖ. ಎಣ್ಣೆಗಾಣದೆ ಹರಡಿದ ಹೆರಳು. ಅವಳಲ್ಲಿ ನೈಜ ಸೌಂದರ್ಯವನ್ನು ಕಂಡೆ. ಕೋಣೆಗೆ ತಿರುಗಿ ಬಂದು ಮಲಗಿದೆ. ಮತ್ತೆ ಎಚ್ಚರವಾದುದು ಬೆಳ್ಳಗೆ ಬೆಳಗಾದ ಮೇಲೆಯೇ. ಭಿಕ್ಷುಕ-ಹುಡುಗಿ ಹೊರಟುಹೋಗಿದ್ದಳು.

* * *

ಮತ್ತೆ ನಾಲ್ಕು ದಿನಗಳು ಕಳೆದುವು. ಆರು ವರ್ಷದ ಆ ಭಿಕ್ಷುಕ-ಸುಂದರಿ ಮನೆಯ ಕಡೆಗೆ ಬಂದಿರಲಿಲ್ಲ. ಪ್ರತಿದಿನವೂ ಅವಳ ಪಾಲಿಗಿಟ್ಟ ಅನ್ನ ಹಳಸಿ ಹೋಗುತ್ತಿತ್ತು. ಅವಳ ಹಾಡು ಕಿವಿಗೆ ಬೀಳದ್ದರಿಂದ ನನಗೆ ಹೇಗೆ ಹೇಗೋ ಎನಿಸಿತು. ಊರೆಲ್ಲ ಸುತ್ತಾಡಿ ಹುಡುಕಿದೆ. ಅವಳ ಪತ್ತೆ ಹತ್ತಲಿಲ್ಲ.

ಅಂದು ಸಂತೆಯ ದಿವಸ. ಚೀಲ ತೆಗೆದುಕೊಂಡು ಪಲ್ಲೆ ಕಾಯಿ ತರಬೇಕೆಂದು ಪೇಟೆಯ ಕಡೆಗೆ ಹೊರಟೆ. ಮಾರ್ಗದಲ್ಲಿ ಒಂದು ಭಿಕ್ಷುಕರ ತಂಡವೇ ಹಾಡುತ್ತ ಹೊರಟಿತ್ತು. ನೋಡುತ್ತ ನಿಂತ ಜನಗಳ ಗುಂಪೂ ಸಾಕಷ್ಟಿತ್ತು. ಕಾಸು, ದುಡ್ಡು ಕೊಟ್ಟು ಹೋಗುತಿದ್ದವರೆಲ್ಲ ಕಣ್ಣಮೇಲೆ ಕೈಯಾಡಿಸಿಕೊಳ್ಳುತ್ತ ಹೋಗುತಿದ್ದರು. ನನಗೆ ಕುತೂಹಲ ಹೆಚ್ಚಿತು. ಜೇಬಿನಿಂದ ಒಂದಾಣೆ ತೆಗೆದು ಭಿಕ್ಷೆಯ ತಟ್ಟೆಯಲ್ಲಿ ಒಗೆಯಬೇಕೆಂದು ಭಿಕ್ಷುಕ ತಂಡದ ಬಳಿಗೆ ಬಂದೆ. ಸಾಲುಗಟ್ಟಿ ನಿಂತು ಭಿಕ್ಷುಕರು ಹಾಡುತಿದ್ದರು. ಅವರ ಮುಂದೆ ಒಂದು ಹುಡುಗಿ ಹೊಟ್ಟೆಯನ್ನು ನೆಲಕ್ಕೆ ಹಚ್ಚಿ ಮಲಗಿಕೊಂಡಿತ್ತು. ಚಾಚಿದ ಕೈಯಲ್ಲೊಂದು ತಟ್ಟೆಯನ್ನು ಹಿಡಿದಿದ್ದಳು. ಹರಳು—ಕಲ್ಲುಗಳಿಂದ ತುಂಬಿದ ಹಾದಿಯ ಮೇಲೆ ಹೊಟ್ಟೆ ಹೊಸೆದು ನೆತ್ತರ ಸುರಿಯುತ್ತಿತ್ತು. ಅವಳ ಕಣ್ತುಂಬ ನೀರಿದ್ದುದರಿಂದ ಮಣ್ಣು ಕಣ್ಣಿಗೆ ಅಂಟಿಕೊಂಡು ಕುರುಡಳಂತಾಗಿದ್ದಳು. ಅವಳು... ನನ್ನ ಪ್ರೀತಿಯ ಭಿಕ್ಷುಕ-ಹುಡುಗಿ ಇವಳೇ ಆಗಿರಬಹುದೇ ಎಂದು ಹಣಿಕಿ ನೋಡಿದೆ. ನಿಜವಾಗಿಯೂ ಅವಳು ನನ್ನ ಗಾನರತ್ನವೇ ಆಗಿದ್ದಳು. ಭಿಕ್ಷುಕರ ಆ ಹೀನ ಕೃತ್ಯವನ್ನು ನೋಡಿ ನನ್ನ ಕೋಪ ಮಿತಿಮೀರಿತು. ತಟ್ಟೆಯನ್ನು ಬಿಸಾಡಿದೆ. ಹುಡಿಗೆಯನ್ನು ಎಬ್ಬಿಸಿ ಉಪಚರಿಸುವದರಲ್ಲಿದ್ದೆ. ತಮ್ಮ ಹೊಟ್ಟೆಯ ಮಾರ್ಗಕ್ಕೆ ಪ್ರತಿಯಾಗಿ ಬಂದ ನನ್ನ ಮೇಲೆ ಕೆರಳಿ, ಹುಡಿಗೆಯನ್ನು ರಕ್ತಸಮೇತ ನೆಲದ ಮೇಲೆ ಒಗೆಯುವುದಾಗಿ ಕೇಳಿದರು. ನಾನವರ ಮಾತಿಗೆ ಕಿವಿಗೊಡಲಿಲ್ಲ. ಅವಳ ಹೊಟ್ಟೆಯ ಮೇಲಿನ ರಕ್ತವನ್ನೆಲ್ಲ ನನ್ನ ಧೋತರದಿಂದಲೇ ಒರೆಸಿದೆ. ಆ ಹೊತ್ತಿಗೆ ಭಿಕ್ಷುಕರೆಲ್ಲ ಒಟ್ಟಾಗಿ ನನ್ನ ಮೇಲೆ ಏರಿಬಂದರು. ನಾನೊಬ್ಬನು ಅವರೆದುರು ಈಡಾಗಲಿಲ್ಲ. ಬವಳಿ ಬಂದು ಬಿದ್ದುಬಿಟ್ಟೆ.

* * *

ಪೇಟೆಯ ಮಾರ್ಗದಲ್ಲಿಯೇ ಇದ್ದ ದವಾಖಾನೆಯಲ್ಲಿ ನನ್ನನ್ನು ತಂದು ಹಾಕಿದರು. ನನಗೆ ವಿಶೇಷವೇನೂ ಗಾಯವಾಗಿರಲಿಲ್ಲ. ಭಿಕ್ಷುಕರ ಹಾಡು ಇನ್ನೂ ಕೇಳಬರುತ್ತಿತ್ತು. ನನ್ನ ಎದೆಯಲ್ಲಿ ಒಂದೇ ಸವನೆ ಕಸಿವಿಸಿಯಾಗುತ್ತಿತ್ತು. ಡಾಕ್ಟರನು ಗಾಯಕ್ಕೆ ಪಟ್ಟಿ ಹಾಕಲು ಬಂದ. ಆವೇಶಭರದಲ್ಲಿ ನಾನು ಕೂಗಿದೆ, "ಡಾಕ್ಟರರೇ, ನನಗಿಂತಲೂ ಎಷ್ಟೋ ಪಾಲು ಹೆಚ್ಚು ಗಾಯಗೊಂಡಿರುವ ಹೆಣ್ಣು ಹುಡುಗಿಯೊಂದು ಬೀದಿಯ ಮೇಲೆ ಬಳಲುತ್ತಿದೆ ನೋಡಿರಲ್ಲಿ! ಧಷ್ಟಪುಷ್ಟ ಭಿಕ್ಷುಕರ ರೊಕ್ಕದ ತಟ್ಟೆ ತುಂಬಿತುಳುಕುತ್ತಿರುವಾಗ ಆ ನನ್ನ ಗಾನರತ್ನದ ಹೊಟ್ಟೆಹರಿದು ರಕ್ತ ಸೋರುತ್ತಿದೆ ನೋಡಿರಲ್ಲಿ!! ಅವಳ ಉಪಚಾರಕ್ಕೆ ನೀವು ಡಾಕ್ಟರರಲ್ಲವೆ? ಕಣ್ಮುಟ್ಟಿ ನೋಡಿಯೂ ನನ್ನೊಬ್ಬನನ್ನೇ ಎತ್ತಿಕೊಂಡು ಬಂದಿರಿ. ಜೇಲಿಗೆ ಸೇರಿಸಿರಿ ಮೊದಲು ಆ ಭಿಕ್ಷುಕರನ್ನು. ಆ ನನ್ನ ಹುಡುಗಿಯನ್ನು ನನಗೆ ಬದುಕಿಸಿ ಕೊಡಿ. ಅಲ್ಲಿಗು ವರೆಗೆ ನನ್ನ ಮನಸ್ಸಿಗೆ ಸಮಾಧಾನವಾಗದು." ಡಾಕ್ಟರರು ತಮ್ಮ ಕೆಲಸ ಮುಗಿಸಿಕೊಂಡು ಹೊರಟು ಹೋದರು. ನನ್ನ ಮಾತೆಲ್ಲ ಬಡಬಡಿಕೆಯಿರಬೇಕೆಂದು ಅವರು ಭಾವಿಸಿದಂತೆ ತೋರುತ್ತದೆ.

ಮರುದಿನ ನನಗೆ ಆಸ್ಪತ್ರೆಯಿಂದ ಬಿಡುಗಡೆಯಾಯಿತು. ಮನೆಯಲ್ಲಿ ಅಮ್ಮ ನೆದುರು ಕುಳಿತು ಗಳಗಳ ಅತ್ತುಬಿಟ್ಟೆ. ಮಧ್ಯಾಹ್ನ ಹನ್ನೆರಡಾದರೂ ಊಟವಮಾಡಬೇಕೆಂದು ಮನಸ್ಸಾಗಲಿಲ್ಲ. ಅಮ್ಮನ ಜುಲುಮೆಗೆ ಹೇಗೋ ಬಂದು ಎಲೆಯ ಮೇಲೆ ಕುಳಿತೆ. ಹುಡುಗಿಯ ಅನ್ನದ ತಟ್ಟೆ ಬಂದುಬಿದ್ದಿತ್ತು. ನನ್ನ ಎಲೆಯಲ್ಲಿ ಬಡಿಸಿದ ಅನ್ನವನ್ನೇ ತೆಗೆದು ಆ ತಟ್ಟೆಯಲ್ಲಿ ಹಾಕಿ, ಊಟಕ್ಕೆ ಕೂಡ್ರುವುದರಲ್ಲಿದ್ದೆ. ಅಷ್ಟರಲ್ಲಿ ಬಾಗಿಲಲ್ಲಿ ಒಬ್ಬ ಭಿಕ್ಷುಕಿಯ ಧ್ವನಿಯಾಯಿತು. ಆದರೆ ನನ್ನ ಗಾನರತ್ನದ್ದಲ್ಲ. ಅನ್ನ ತುಂಬಿದ ತಟ್ಟೆಯನ್ನು ತೆಗೆದುಕೊಂಡು ಹೊರಗೆ ಬಂದೆ. ಮಧ್ಯವಯಸ್ಸಿನ ಒಬ್ಬ ಸ್ತ್ರೀ, ಏನೋ ಒಂದು ಭಾರವಾದ ವಸ್ತುವನ್ನು ಸೀರೆಯ ಸೆರಗಿನಿಂದ ಮುಚ್ಚಿ ಎದೆಗೆ ಅಮಚಿಕೊಂಡು, ಹಾಡುತ್ತನಿಂತಿದ್ದಳು. ನನ್ನ ಭಿಕ್ಷುಕ ಸುಂದರಿ ಹಾಡುತ್ತಿದ್ದ ಹಾಡೇ ಅದಾಗಿದ್ದಿತು. ಕಡೆಯ ಈ ಎರಡು ಸಾಲುಗಳು ನನ್ನ ಕಣ್ಣಲ್ಲಿ ನೀರು ತಂದವು:

'ತಾಯಿ ಮಗುವನು ಅಗಲಿ,
ಮಗುವು ತಾಯಿಯನಗಲಿ,
ಬದುಕುವದು ಬದುಕಲ್ಲ,
ಸಾವಿನ ಪ್ರತೀಕ.'

ನಾನು ಅನ್ನ ಹಾಕಲು ಕೈಮುಂದೆ ಮಾಡಿದಾಗ ಅವಳು ಸೆರಗನೊಡ್ಡಿದಳು. ತಟ್ಟೆಯಲ್ಲಿದ್ದ ಅನ್ನ ಅವಳ ಸೆರಗಿನಲ್ಲಿ ಬಿದ್ದು, ಸೆರಗಿನಲ್ಲಿ ಮುಸುಗಿದ ಆ ಭಾರವಾದ ವಸ್ತು ನೆಲಕ್ಕೆ ಬಿದ್ದಿತು. ಅದನ್ನು ನೋಡುತ್ತಲೇ ನನ್ನ ಎದೆ ಧಸ್ಸೆಂದಿತು. ಅದು ನನ್ನ ಪ್ರೀತಿಯ ಹುಡುಗಿಯ ಹೆಣ. ಆ ಹಿರಿಯ ಭಿಕ್ಷುಕಿ ಸತ್ತ ಹುಡುಗೆಯ ತಾಯಿಯೆಂದಾಗ ತಿಳಿಯಿತು. ಹಸಿವೆಯಿಂದ ಕಂಗಾಲಾಗಿದ್ದ ಅವಳು ಅನ್ನ ಮುಕ್ಕುತ್ತಿದ್ದಳು. ನನಗೆ ಅಳಬೇಕೋ ನಗಬೇಕೋ ತಿಳಿಯದಾಯಿತು.

**Reg. No. B. 3148** | **LICENCE No. 3** Licenced to Post without Prepayment | ***KARMAVEER 25-11-46***




**ಜ್ಯೋತಿಷಿ:-ಕೃಷ್ಣಶಾಸ್ತ್ರಿ ಭಿಡೆ, ಭವಿಷ್ಯಕಥನ ಕಾರ್ಯಾಲಯ, ಖಡೇಬಜಾರ ಬೆಳಗಾವಿ**

# ನವಂಬರ ೨೫ ರಿಂದ ೧ ರ ವರೆಗೆ

## ಮೇಷ

ನಿಮ್ಮ ಮಕ್ಕಳ ಪ್ರಕೃತಿಗೆ ಸ್ವಲ್ಪ ಕಾಯಿಲೆಯುಂಟಾಗುವ ಅಂಜಿಕೆ. ಆದರೆ ಹೆಂಡತಿ ಮತ್ತು ಉಳಿದ ಪ್ರಾಪಂಚಿಕ ಸುಖ ಬಹಳ ಉತ್ತಮ. ಉದ್ಯೋಗದಲ್ಲಿ ಪ್ರಗತಿ ಹೆಚ್ಚು ದೊಡ್ಡ ಪ್ರತಿಷ್ಠೆ ಮತ್ತು ತುಂಬ ಲಾಭ. ಪ್ರತಿಯೊಂದು ಕೆಲಸದಲ್ಲಿ ಮೊದಲು ಅಡಚಣಿ ಎನಿಸಿದರೂ ಕೊನೆಗೆ ಉತ್ತಮ ಯಶಸ್ಸು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಶತ್ರುಗಳ ತೊಂದರೆ ವಿಲಕ್ಷಣ. ಆದರೆ ಯಶಸ್ಸು ನಿಮ್ಮ ಪದರಿನಲ್ಲಿಯೆ. ಮಿತ್ರರಲ್ಲಿ ಉತ್ಕರ್ಷ ಆದರೆ ಅವರು ನಿಮ್ಮ ಗೂಡ ಸರಳ ರೀತಿಯಿಂದ ವರ್ತಿಸುವದಿಲ್ಲ. ಅವಚಿತ ಲಾಭದ ಸಂಭವ ಬಹಳ. ಪ್ರವಾಸ ಮತ್ತು ಭೆಟ್ಟಿ, ಪತ್ರ ವ್ಯವಹಾರಕ್ಕಿಂತ ಅನುಕೂಲ. ಅಶ್ವಿನಿಯು ಕೊನೆಯು ೨ ಮತ್ತು ಭರಣಿಯು ಮೊದಲನೆ ೨ ಚರಣಗಳಿಗೆ. ತೊಂದರೆ ಕಡಮೆ. ತಾ. ೨೬, ೨೭, ೧ ಅನುಕೂಲ.

## ವೃಷಭ

ನಿಮ್ಮ ಪ್ರಕೃತಿ ಸಾಧಾರಣವೆ ಆದರೆ ಹೆಂಡತಿ ಮತ್ತು ಮಕ್ಕಳದು ಮಾತ್ರ ಉತ್ತಮ. ಹೆಂಡತಿಯ ವಿಪರೀತ ಅಟ್ಟಹಾಸವನ್ನು ಪೂರೈಸಬೇಕಾದ್ದರಿಂದ ಇಬ್ಬರಲ್ಲಿಯೂ ವಾಗ್ವಾದ. ಉದ್ಯೋಗದಲ್ಲಿ ಉತ್ತಮ ಪ್ರಗತಿ. ಆದರೆ ಪ್ರತಿಷ್ಠೆ ಮತ್ತು ಲಾಭ ಸಾಧಾರಣವೆ ಶತ್ರುಗಳಿಗಿಂತ ಮಿತ್ರರು ತೊಂದರೆ ಕೊಡುವ ವರ್ತನೆ ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಶತ್ರುಗಳ ಜೋರು ಹೆಚ್ಚು. ಪ್ರವಾಸ ಮತ್ತು ಪತ್ರವ್ಯವಹಾರ ಭೆಟ್ಟಿಗಿಂತ ಹೆಚ್ಚು ಸುಖದ್ದು. ಕೃತ್ತಿಕೆಯು ಕೊನೆಯು ೨ ಮತ್ತು ರೋಹಿಣಿಯು ಮೊದಲನೆ ೨ ಚರಣಗಳಿಗೆ ತೊಂದರೆ ಕಡಮೆ. ತಾ. ೨೫, ೨೮, ೨೯, ೩೦ ಅನುಕೂಲ.

## ಮಿಥುನ

ಪ್ರಕೃತಿಗೆ ಬಹಳ ಕ್ಲೇಶದ ಅಂಜಿಕೆ. ಅದರಲ್ಲಿಯೂ ಪ್ರಪಂಚದಲ್ಲಿ ಆಗಂತುಕವಾಗಿ ತೊಂದರೆಗಳು ಒಂದೇ ಸಪನೆ ಬರಹತ್ತುವವು. ಅದರಲ್ಲಿ ಹೆಂಡತಿ ಮತ್ತು ಮಕ್ಕಳ ಸುಖ ಸ್ವಲ್ಪ ಅನುಕೂಲ. ಸ್ಥಾವರದಲ್ಲಿ ನಿಸರ್ಗ ಕೋಪದಿಂದ ಹಾನಿಯಾದರೆ ರೋಖ ವ್ಯವಹಾರದಲ್ಲಿ ನಿಮ್ಮ ಮೂರ್ಖತನದಿಂದ ಹಾನಿ ಉದ್ಯೋಗದಲ್ಲಿ ಪ್ರಗತಿ ಮತ್ತು ಪ್ರತಿಷ್ಠೆ ಅನುಕೂಲ. ಆದರೆ ಶತ್ರುಗಳನ್ನು ಮತ್ತು ಪ್ರತಿಸ್ಪರ್ಧಿಗಳನ್ನು ಸೋಲಿಸಬೇಕೆಂದು ಲಾಭದತ ಪೂರ್ಣ ದುರ್ಲಕ್ಷ. ಅರ್ಥಾತ್ ಸಣ್ಣ ದೊಡ್ಡ ಎಲ್ಲೆ ವೆಚ್ಚ ಪದರಿನಿಂದಲೆ ಮಾಡುವ ಪ್ರಸಂಗ. ವಾದದಲ್ಲಿ ಉಭಯ ಪಕ್ಷಗಳ ಸಮಾನ ಸ್ಥಿತಿ, ಪ್ರವಾಸ ಮತ್ತು ಭೆಟ್ಟಿ ಪತ್ರವ್ಯವಹಾರಕ್ಕಿಂತ ಅನುಕೂಲ. ಆರ್ದ್ರೆಯು ಮೊದಲನೆ ೨ ಮತ್ತು ಪುನರ್ವಸುವಿನ ಮೊದಲನೆ ೨ ಚರಣಗಳಿಗೆ ತೊಂದರೆ ಹೆಚ್ಚು. ತಾ. ೨೬, ೨೭, ೧ ಅನುಕೂಲ.

## ಕರ್ಕ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಬಹಳ ಉತ್ತಮ. ಮಕ್ಕಳಲ್ಲಿ ಉನ್ನತಿ ಮತ್ತು ವಿಸ್ಮಯಕಾರಕ ಕೆಲ ಸಂಗತಿಗಳು. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಬಹಳ ಉತ್ತಮ. ಪ್ರತಿಯೊಂದು ಕೆಲಸದಲ್ಲಿ ಉತ್ಸಾಹ ಬೆಳೆಯುತ್ತಲೆ ಹೋಗುವದು. ಸಂಗ್ರಹ ಬಹಳ. ಕೆಲ ಮಂಗಳ ಕೃತ್ಯಗಳು. ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರ ಹೆಚ್ಚು ಅನುಕೂಲ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳಲ್ಲಿ ಸಮಾನ ಸ್ಥಿತಿ. ಪುಷ್ಯದ ಕೊನೆಯು ೨ ಮತ್ತು ಆಶ್ಲೇಷಾದ ಮೊದಲನೆ ೨ ಚರಣಗಳಿಗೆ ತೊಂದರೆ ಕಡಮೆ. ತಾ. ೨೫, ೨೮, ೨೯, ೩೦ ಅನುಕೂಲ.

## ಸಿಂಹ

ಪ್ರಕೃತಿ ಸಾಧಾರಣವೆ. ಹೆಂಡತಿಯದೂ ಸಾಧಾರಣ. ಮಕ್ಕಳಲ್ಲಿ ಉತ್ತಮ ಉತ್ತಮವೆನಿಸುವ ಕೆಲ ಸಂಗತಿಗಳು. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಸಂಭವಿಸುವ ವರೆಗೆ ಜೀವಕ್ಕೆ ವಿಶೇಷ ಕ್ಲೇಶ. ಆದರೆ ಲಾಭವಾದರೆ ಮಾತ್ರ ಅಂದಾಜಿಗಿಂತ ಹೆಚ್ಚು ಅನುಕೂಲ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಪೂರ್ಣ ಹಿನ್ನೆಡುವದು. ಪ್ರವಾಸಾದಿ ಕೆಲಸ ಕಷ್ಟದಿಂದಲೆ ಆದರೂ ಮನಸ್ಸಿನಂತೆ ಆಗುವವು. ಮಘಾದ ಕೊನೆಯು ೨ ಮತ್ತು ಪೂರ್ವಾದ ಮೊದಲನೆ ೨ ಚರಣಗಳಿಗೆ ತೊಂದರೆ ಕಡಮೆ. ತಾ. ೨೬, ೨೭, ೧ ಅನುಕೂಲ.

## ಕನ್ಯಾ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಬಹಳ ಉತ್ತಮ. ಹೆಂಡತಿ ಅತ್ಯಂತ ದಕ್ಷತೆಯಿಂದ ಕೆಲಸ ಮಾಡುವಳು. ಅದರಿಂದ ಆಪ್ತರೂ ಅವಳ ಗೌರವವನ್ನು ಹೆಚ್ಚಾಗಿ ಮಾಡುವರು. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಬಹಳ ಉತ್ತಮ. ಪ್ರತಿಯೊಂದು ಕೆಲಸದಲ್ಲಿ ಮೊದಲು ಅಂಜಿಕೆ ಮತ್ತು ಸಂಶಯ. ಆದರೆ ಕೊನೆಗೆ ಅವಸಾನ ಬೆಳೆಸುವಂಥ ಯಶಸ್ಸು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಭಾವೀ ವಿಜಯದ ಚಿನ್ಹಗಳು ಸೂಚಿತವಾಗುವಂಥ ಕೆಲ ಪ್ರಸಂಗಗಳು. ಮಿತ್ರಸುಖ ಉತ್ತಮ. ಉಪಯುಕ್ತ ವಸ್ತುಗಳ ಸಂಗ್ರಹ ಪ್ರವಾಸ ಮತ್ತು ಪತ್ರವ್ಯವಹಾರ ಭೆಟ್ಟಿಗಿಂತ ಹೆಚ್ಚು ಅನುಕೂಲ. ಉತ್ತರಾದ ಕೊನೆಯು ೨ ಮತ್ತು ಹಸ್ತಾದ ಮೊದಲನೆ ೨ ಚರಣಗಳಿಗೆ ಹೆಚ್ಚು ಅನುಕೂಲ. ತಾ. ೨೫, ೨೮, ೨೯, ೩೦ ಅನುಕೂಲ.

## ತುಲಾ

ನಿಮ್ಮ ಮತ್ತು ಹೆಂಡತಿಯು ಪ್ರಕೃತಿ ಉತ್ತಮ. ಆದರೆ ಮಕ್ಕಳ ಉನ್ನತಿಯು ಮಾರ್ಗದಲ್ಲಿ ಮಾತ್ರ ಉಭಯತರಲ್ಲಿ ಬಹಳ ಮತಭೇದ. ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಅನುಕೂಲ. ಉದ್ಯೋಗದಲ್ಲಿ ಪ್ರಗತಿ ಮತ್ತು ಪ್ರತಿಷ್ಠೆ ಸಾಧಾರಣವೆ. ಆದರೆ ಲಾಭ ಉತ್ತಮ. ಸಂಗ್ರಹದಲ್ಲಿ ಸ್ವಲ್ಪ ಹೆಚ್ಚಳ. ಸ್ವಪ್ನಗಳು ಮನಸ್ಸಿಗೆ ಹುರಹುರಿಯುಂಟು ಮಾಡುವಂಥವು. ವಾದದಲ್ಲಿ ಬಹಳ ಅನುಕೂಲತೆ. ಆದರೆ ವಿರೋಧಿಗಳಲ್ಲಿ ಅಡ್ಡತಿಡ್ಡ ಹೋಗುವ ವಿಲಕ್ಷಣ ವೃತ್ತಿ. ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರ ಹೆಚ್ಚು ಅನುಕೂಲ. ಸ್ವಾತಿಯು ಕೊನೆಯು ೨ ಮತ್ತು ವಿಶಾಖಾದ ಮೊದಲನೆ ೨ ಚರಣಗಳಿಗೆ ತೊಂದರೆಯಿಂದಲೆ ಯಶಸ್ಸು ತಾ. ೨೫, ೨೬, ೨೭, ೧ ಅನುಕೂಲ.

## ವೃಶ್ಚಿಕ

ಎಲ್ಲರ ಪ್ರಕೃತಿ ಅನುಕೂಲ. ಆದರೆ ಪರಸ್ಪರರಲ್ಲಿ ವಿಶೇಷತಃ ಪತಿ ಪತ್ನಿಯರಲ್ಲಿ ಮೇಲಿಂದ ಮೇಲೆ ವಿರೋಧದ ಬಿರುಗಾಳಿ ಏಳುವ ಪ್ರಸಂಗ. ಬಂಧುವರ್ಗದವರಲ್ಲಿ ಉನ್ನತಿ. ಮಕ್ಕಳು ಕೈಯಲ್ಲಿ ಇದ್ದ ಹೋರೆಯನ್ನು ಬಿಟ್ಟುಗೊಟ್ಟು ಅಧ್ರುವವಾದ ಉದ್ಯೋಗದ ಬೆನ್ನು ಹತ್ತಿ ಬಹಳ ಮೋಸ ಹೋಗುವರು. ನಿಮ್ಮ ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಜೋರಿನಲ್ಲಿ ಇದ್ದಂತೆ ವೆಚ್ಚವೂ ವಿಪರೀತ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳಲ್ಲಿ ಸಮಾನ ಸ್ಥಿತಿ. ಪ್ರವಾಸಾದಿ ಕೆಲಸ ಸಾಮಾನ್ಯ. ಅನುರಾಧೆಯು ಕೊನೆಯು ೨ ಮತ್ತು ಜ್ಯೇಷ್ಠಾದ ಮೊದಲನೆ ೨ ಚರಣಗಳಿಗೆ ತೊಂದರೆ ಕಡಮೆ. ತಾ. ೨೭, ೨೮, ೨೯ ಅನುಕೂಲ.

## ಧನು

ನಿಮ್ಮ ಪ್ರಕೃತಿ ಅನುಕೂಲ. ಆದರೆ ಹೆಂಡತಿಯದು ಮತ್ತು ಮಕ್ಕಳದು ಕೆಡುವದು. ಉದ್ಯೋಗದಲ್ಲಿ ಪ್ರಗತಿ ಮತ್ತು ಪ್ರತಿಷ್ಠೆ ತೊಂದರೆಕೊಡುವಂಥದು. ಆದರೆ ಲಾಭ ತುಂಬ, ವೆಚ್ಚ ಹೆಚ್ಚು. ಆದರೆ ಅದರಲ್ಲಿಯು ಹೇತು ಸಾಧ್ಯ. ಮಿತ್ರಸುಖ ಉತ್ತಮ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಪುರಾವೆಯ ದೃಷ್ಟಿಯಿಂದ ನಿಮ್ಮದೇ ಪಕ್ಷ ಕುಂಟೆ. ಬೇರೆ ಅಡಚಣಿಗಳಿಂದಲೂ ಶತ್ರುಗಳು ತ್ರಸ್ತರಾಗುವರು. ಪ್ರವಾಸಾದಿ ಕೆಲಸ ಅತ್ಯಂತ ತೊಂದರೆಯದು. ಮೂಲಾದ ಕೊನೆಯು ೨ ಮತ್ತು ಪೂರ್ವಾಷಾಢಾದ ಮೊದಲನೆ ೨ ಚರಣಗಳಿಗೆ ತೊಂದರೆ ಕಡಮೆ. ತಾ. ೨೫, ೨೬ ೨೭ ೨೯ ಅನುಕೂಲ.

## ಮಕರ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಬಹಳ ಉತ್ತಮ ಸ್ಥಾವರ ಮತ್ತು ಜಂಗಮದಲ್ಲಿ ಎರಡನೆಯವರ ತಪ್ಪಿ ತಿಳುವಳಿಕೆಯು ಲಾಭತೆಗೆದುಕೊಂಡು ಸಂಗ್ರಹ ಹೆಚ್ಚಿಸಿಕೊಂಡ ಲೋಕಾಪವಾದ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಬಹಳ ಉತ್ತಮ ಮತ್ತು ಪರೋಪಕಾರದಲ್ಲಿ ಸ್ವಲ್ಪ ವೆಚ್ಚ, ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ವಿಜಯ. ಮಿತ್ರಸುಖ ಉತ್ತಮ. ಆದರೆ ಅವರ ಪರಿವಾರದವರಿಂದ ಅನಾದರದ ನಿದರ್ಶನ. ಪ್ರವಾಸಾದಿ ಕೆಲಸ ಹಿತದ್ದು. ಉತ್ತರಾಷಾಢಾದ ಕೊನೆಯು ೨ ಮತ್ತು ಶ್ರವಣಾದ ಮೊದಲನೆ ೨ ಚರಣಗಳಿಗೆ ಹೆಚ್ಚು ಅನುಕೂಲ. ತಾ. ೨೫, ೨೯, ೩೦ ಅನುಕೂಲ.

## ಕುಂಭ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಸಾಧಾರಣವೆ. ಬೇರೆ ಬೇರೆಯವರ ಸ್ವಾರ್ಥದೃಷ್ಟಿಯಿಂದ ಮಹತ್ವದ ಸಂಗತಿಗಳು ಹಾಳಾಗುವವು. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಅತಿ ಉತ್ತಮ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಒಳ್ಳೆ ಸುಖ. ಪ್ರವಾಸಾದಿ ಕೆಲಸ ಹಿತದ್ದು. ಶತತಾರಿಕೆಯು ಕೊನೆಯು ೨ ಮತ್ತು ಪೂರ್ವಾಭಾದ್ರಪದದ ಮೊದಲನೆ ೨ ಚರಣಗಳಿಗೆ ತೊಂದರೆಯಿಂದಲೆ ಯಶಸ್ಸು. ತಾ. ೨೬, ೨೭, ೧ ಅನುಕೂಲ.

## ಮೀನ

ಪ್ರಕೃತಿ ಸಾಧಾರಣವೆ. ಸ್ತ್ರೀಸುಖ ಉತ್ತಮ ಆದರೆ ಪರಸ್ತ್ರೀ ಬಗ್ಗೆ ಪಾಪಬುದ್ಧಿ, ಉದ್ಯೋಗದಲ್ಲಿ ಉತ್ತಮ ಪ್ರಗತಿ ತುಂಬ ಲಾಭ. ಆದರೆ ಪ್ರತಿಷ್ಠೆಗೆ ಸ್ವಲ್ಪ ಕುಂದು. ಬಂಧುವರ್ಗದವರಲ್ಲಿ ಸ್ಪರ್ಧೆ. ಏನೇನೋ ಕೆಲಸ ಮಾಡುವ ಸಾಹಸ, ಮಿತ್ರ ಸುಖ ಅನುಕೂಲ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಒಳ್ಳೆ ಯಶಸ್ಸು. ಸ್ವಪ್ನ ಶುಭ ಮತ್ತು ಭವಿಷ್ಯಸೂಚಕ. ಪೂಜ್ಯವ್ಯಕ್ತಿಯು ಸಹವಾಸ ಅವಚಿತ ಲಾಭಥ ಸಂಭವ ಪ್ರವಾಸ ಮತ್ತು ಪತ್ರವ್ಯವಹಾರ ಭೆಟ್ಟಿಗಿಂತ ಹೆಚ್ಚು ಅನುಕೂಲ. ಉತ್ತರಾಭಾದ್ರಪದದ ಕೊನೆಯು ೨ ಮತ್ತು ರೇವತಿಯು ಮೊದಲನೆ ೨ ಚರಣಗಳಿಗೆ ತೊಂದರೆ ಕಡಮೆ. ತಾ. ೨೫, ೨೬, ೨೮, ೨೯ ಅನುಕೂಲ.

---

ಜರ್ಮನಿಯ ಬ್ರಿಟಿಶ ವಿಭಾಗದಲ್ಲಿ ಆಹಾರ ಪರಿಸ್ಥಿತಿ ಕೆಟ್ಟು ಹಿಂಸಾಚಾರಗಳಾಗುವ ಭೀತಿಯುಂಟಾಗಿದೆ. ಬೇಗನೆ ಪರಿಸ್ಥಿತಿ ಸುಧಾರಿಸದಿದ್ದರೆ ವಿಕೋಪಕ್ಕೆ ಹೋಗುವದೆಂದು ಅಲ್ಲಿಯ ಕೂಲಿಕಾರ ಸಂಘಗಳ ಮುಂದಾಳುಗಳು ಎಚ್ಚರಿಸಿದ್ದಾರೆ.





ಈ ಪತ್ರಿಕೆಯು ಹುಬ್ಬಳ್ಳಿಯ ಸಂಯುಕ್ತಕರ್ನಾಟಕ ಮುದ್ರಣಾಲಯದಲ್ಲಿ | ರಾಷ್ಟ್ರೀಯ ವಾಙ್ಮಯ ಪ್ರಕಾಶನ ಟ್ರಸ್ಟಿನ ಪರವಾಗಿ ಹ. ರಾ. ಮೋಹರೆಯವರಿಂದ ಮುದ್ರಿತ ಪ್ರಕಟವಾಯಿತು.